# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೯, ೨೦೧೪ (ಆಷಾಡ ೧೮, ಶಕ ವರ್ಷ ೧೯೩೬) | ನಂ. ೪೫೧ |
|---|---|---|
| Part – IV-A | Bangalore, Wednesday, July 9, 2014 (Ashadha 18, Shaka Varsha 1936) | No. 451 |


## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 50 ಎಂಎಲ್ಆರ್ 2014, ಬೆಂಗಳೂರು, ದಿನಾಂಕ: 08.07.2014**

**ವಿಷಯ:** ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013ರಡಿಯಲ್ಲಿ ಪೌರಾಡಳಿತ ಇಲಾಖೆಯ ಹೈದರಾಬಾದ್–ಕರ್ನಾಟಕ ಪ್ರದೇಶದ ನಗರ ಸ್ಥಳೀಯ ಸಂಸ್ಥೆಗಳ "ಎ" ಸಮೂಹಕ್ಕೆ ಸೇರಿದ ವಿವಿಧ ವೃಂದಗಳಲ್ಲಿನ ಶೇ.75 ರಷ್ಟು ಹುದ್ದೆಗಳನ್ನು ಗುರುತಿಸುವ ಕುರಿತು.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 43 ಹೆಚ್‌ಕೆಸಿ 2013, ದಿನಾಂಕ 29.01.2014.

ಭಾರತ ಸಂವಿಧಾನದ ಅನುಚ್ಛೇದ 371 (ಜೆ)ಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ಅಧಿಸೂಚನೆಯನುಸಾರ ಜಾರಿಗೊಳಿಸಲಾಗಿರುವ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು 2013ರ ಕಂಡಿಕೆ 3(ಬಿ) ರಂತೆ ವೃಂದ ನಿಯಂತ್ರಣಾ ಪ್ರಾಧಿಕಾರವು ಪ್ರಾದೇಶಿಕ ಸ್ಥಳೀಯ ವೃಂದ ರಚಿಸಿ ಸದರಿ ವೃಂದದ ಅಧಿಕಾರಿ ವ್ಯಾಪ್ತಿಯೊಳಗೆ ರಾಜ್ಯ ಸರ್ಕಾರ ಅಥವಾ ಸಂಸ್ಥೆ ಅಥವಾ ಸಂಘಟನೆಯ ಸಂಬಂಧಪಟ್ಟ ವೃಂದಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿದ ಕಿರಿಯ ಶ್ರೇಣಿ ದರ್ಜೆಗೆ ತತ್ಸಮಾನವಾದ "ಎ" ಸಮೂಹದ ಹುದ್ದೆಗಳ ಸಂಖ್ಯೆಯನ್ನು ಗುರುತಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ ವ್ಯಾಪ್ತಿಯ ನಗರ ಸ್ಥಳೀಯ ಸಂಸ್ಥೆಗಳಲ್ಲಿನ ಕಿರಿಯ ಶ್ರೇಣಿಗೆ ತತ್ಸಮಾನವಾದ "ಎ" ಸಮೂಹಕ್ಕೆ ಸೇರಿದ ಪೌರಾಯುಕ್ತರು ಶ್ರೇಣಿ–2, ಸಹಾಯಕ ಕಾರ್ಯಪಾಲಕ ಅಭಿಯಂತರರು, ಸೀನಿಯರ್ ಪ್ರೋಗ್ರಾಮರ್ ವೃಂದಗಳಲ್ಲಿ ಸ್ಥಳೀಯ ವ್ಯಕ್ತಿಗಳಿಗೆ ಲಭ್ಯವಾಗುವ ಶೇ.75ರಷ್ಟು ಹುದ್ದೆಗಳನ್ನು ಕೆಳಕಂಡ ಅನುಸೂಚಿಯಲ್ಲಿರುವಂತೆ ಮೀಸಲಿರಿಸಿ ಈ ಮೂಲಕ ಅಧಿಸೂಚಿಸಲಾಗಿದೆ.

**ಪೌರಾಯುಕ್ತರು ಶ್ರೇಣಿ–2**

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ | ಹೈ.ಕ. ವಿಭಾಗಕ್ಕೆ ಮಂಜೂರಾದ ವೃಂದ ಬಲ | ಮುಂಬಡ್ತಿ | ನೇರ ನೇಮಕಾತಿ | ಸ್ಥಳೀಯ ವೃಂದದಲ್ಲಿ ಹೈ–ಕ. ಪ್ರದೇಶದವರಿಗಾಗಿ ಗುರುತಿಸಲಾದ ಶೇ. 75ರಷ್ಟು ಹುದ್ದೆಗಳು | | |
|---|---|---|---|---|---|---|---|---|
| | | | | | | ಒಟ್ಟು | ನೇ.ನೇ. | ಮುಂಬಡ್ತಿ |
| 1. | ಪೌರಾಯುಕ್ತರು ಶ್ರೇಣಿ–2 | 28100–50100 | 6 | 6 | 0 | 5 | 0 | 5 |

**ಸಹಾಯಕ ಕಾರ್ಯಪಾಲಕ ಅಭಿಯಂತರರು**

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ | ಹೈ.ಕ. ವಿಭಾಗಕ್ಕೆ ಮಂಜೂರಾದ ವೃಂದ ಬಲ | ಮುಂಬಡ್ತಿ | ನೇರ ನೇಮಕಾತಿ | ನಿಯೋಜನೆ | ಸ್ಥಳೀಯ ವೃಂದದಲ್ಲಿ ಹೈ–ಕ. ಪ್ರದೇಶದವರಿಗಾಗಿ ಗುರುತಿಸಲಾದ ಶೇ. 75ರಷ್ಟು ಹುದ್ದೆಗಳು | | | |
|---|---|---|---|---|---|---|---|---|---|---|
| | | | | | | | ಒಟ್ಟು | ಮುಂಬಡ್ತಿ | ನೇ.ನೇ. | ನಿಯೋಜನೆ |
| 1. | ಸಹಾಯಕ ಕಾರ್ಯಪಾಲಕ ಅಭಿಯಂತರರು | 28100–50100 | 9 | 5 | 3 | 1 | 7 | 4 | 2 | 1 |

ಸೀನಿಯರ್ ಪ್ರೋಗ್ರಾಮರ್

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ | ಹೈ.ಕ. ವಿಭಾಗಕ್ಕೆ ಮಂಜೂರಾದ ವೃಂದ ಬಲ | ಮುಂ ಬಡ್ತಿ | ನೇರ ನೇಮ ಕಾತಿ | ನಿಯೋ ಜನೆ | ಸ್ಥಳೀಯ ವೃಂದದಲ್ಲಿ ಹೈ–ಕ. ಪ್ರದೇಶದವರಿಗಾಗಿ ಗುರುತಸಲಾದ ಶೇ. 75ರಷ್ಟು ಹುದ್ದೆಗಳು | | | |
|---|---|---|---|---|---|---|---|---|---|---|
| | | | | | | | ಒಟ್ಟು | ಮುಂ ಬಡ್ತಿ | ನೇ.ನೇ. | ನಿಯೋಜನೆ |
| 1. | ಸೀನಿಯರ್ ಪ್ರೋಗ್ರಾಮರ್ | 28100–50100 | 9 | 3 | 3 | 3 | 7 | 3 | 3 | 1 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೯, ೨೦೧೪ (ಆಷಾಡ ೧೮, ಶಕ ವರ್ಷ ೧೯೩೬) | ನಂ. ೪೫೨ |
|---|---|---|
| **Part – IV-A** | **Bangalore, Wednesday, July 9, 2014 (Ashadha 18, Shaka Varsha 1936)** | **No. 452** |

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 47 ಎಸ್‌ಎಂಆರ್ 2012, ಬೆಂಗಳೂರು, ದಿನಾಂಕ: 09.07.2014**

ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮ 1978 (1990ರ ಕರ್ನಾಟಕ ಅಧಿನಿಯಮ 14) ರ 8ನೇ ಪ್ರಕರಣದೊಂದಿಗೆ ಓದಲಾದ, 3ನೇ ಪ್ರಕರಣದ (1) ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು 1963ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವ ಈ ಮುಂದಿನ ನಿಯಮಗಳ ಕರಡನ್ನು, ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ಅದರಿಂದ ತೊಂದರೆಗೊಳಗಾಗಬಹುದಾದ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅದು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಸದರಿ ಕರಡಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರವು ಮೇಲೆ ನಿಗಧಿಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಯಾರೇ ವ್ಯಕ್ತಿಯಿಂದ ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ವಿಧಾನ ಸೌಧ, ಬೆಂಗಳೂರು–560 001 ಇವರಿಗೆ ಸಲ್ಲಿಸಬಹುದು.

### ಕರಡು ನಿಯಮಗಳು

**1. ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) (ತಿದ್ದುಪಡಿ) ನಿಯಮಗಳು, 2014 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನಿಯಮ 3 ರ ತಿದ್ದುಪಡಿ:–** ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963ರ ನಿಯಮ 14ರ ಉಪ ನಿಯಮ (2)ರ ಖಂಡ (ಎನ್) ರಲ್ಲಿನ ನಮೂದುಗಳ ಬದಲಾಗಿ ಕೆಳಕಂಡವುಗಳನ್ನು ಪ್ರತಿಸ್ಥಾಪಿಸತಕ್ಕದ್ದು:–

**"ಶ್ರವಣ ಸಾಧನ ಖರೀದಿಯ ಸಂಬಂಧದ ವೆಚ್ಚವನ್ನು ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯವು ಕೇಂದ್ರ ಸರ್ಕಾರದ ಆರೋಗ್ಯ ಸೇವೆಗಳ (CGHS) ಅಡಿಯಲ್ಲಿ ದಿನಾಂಕ: 21.03.2012ರ ಅಧಿಕೃತ ಜ್ಞಾಪನ ಸಂಖ್ಯೆ: S.14025/10/2002/MS ರಲ್ಲಿ ನಿಗಧಿಪಡಿಸಿರುವ ದರದಲ್ಲಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು, ಸರ್ಕಾರಿ ನೌಕರನ ಇಡೀ ಸೇವಾವಧಿಯಲ್ಲಿ ಎರಡು ಬಾರಿ ಮಾತ್ರ ಪಡೆಯಲು ಅನುಮತಿಸತಕ್ಕದ್ದು:–**

**(i)** **ಶ್ರವಣ ಸಾಧನ ಖರೀದಿಯ ವೆಚ್ಚದ ಮರುಪಾವತಿ ಸೌಲಭ್ಯವು ಸರ್ಕಾರಿ ನೌಕರನಿಗೆ ಮಾತ್ರ ಅಂಗೀಕಾರಾರ್ಹವಾಗಿರುತ್ತದೆ. ಆದರೆ ಆತನ ಕುಟುಂಬದ ಸದಸ್ಯರಿಗೆ ಈ ಸೌಲಭ್ಯವಿರುವುದಿಲ್ಲ;**

**(ii)** **ಸರ್ಕಾರಿ ಆಸ್ಪತ್ರೆಯ ಇ.ಎನ್.ಟಿ. ವಿಭಾಗದ ಮುಖ್ಯಸ್ಥರು ನೀಡುವ ಪ್ರಮಾಣ ಪತ್ರದ ಆಧಾರದ ಮೇಲೆ ಖರೀದಿಸುವ ಶ್ರವಣ ಸಾಧನದ ವೆಚ್ಚದ ಮರುಪಾವತಿಯು ಅಂಗೀಕಾರಾರ್ಹವಾಗಿರುವುದು. ಇ.ಎನ್.ಟಿ. ವಿಭಾಗದ ಮುಖ್ಯಸ್ಥರು ಶಿಫಾರಸ್ಸು ಮಾಡುವ ಪ್ರಮಾಣ ಪತ್ರದಲ್ಲಿ ಸರ್ಕಾರಿ ನೌಕರನಿಗೆ ಅವಶ್ಯಕವಿರುವ ಶ್ರವಣ ಸಾಧನದ ಮಾದರಿಯನ್ನು ನಿರ್ದಿಷ್ಟಪಡಿಸಿರತಕ್ಕದ್ದು;**

(iii) ಸರ್ಕಾರಿ ಆಸ್ಪತ್ರೆಯ ಇ.ಎನ್.ಟಿ. ವಿಭಾಗದ ಮುಖ್ಯಸ್ಥರು ನೀಡುವ ಪ್ರಮಾಣ ಪತ್ರದ ಆಧಾರದ ಮೇಲೆ ಶ್ರವಣ ಸಾಧನವನ್ನು ಖರೀದಿಸಲು ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರುಗಳು ಅನುಮತಿಸಬಹುದಾಗಿದೆ ಹಾಗೂ ಕಳೆದ ಐದು ವರ್ಷಗಳಲ್ಲಿ ಶ್ರವಣ ಸಾಧನ ಖರೀದಿಯ ವೆಚ್ಚವನ್ನು ಮರುಪಾವತಿ ಪಡೆದಿಲ್ಲವೆಂಬ ಮುಚ್ಚಳಿಕೆಯನ್ನು (**undertaking**) ಸರ್ಕಾರಿ ನೌಕರನಿಂದ ಪಡೆಯವುದು.

(iv) ಸರ್ಕಾರಿ ಆಸ್ಪತ್ರೆಯ ಇ.ಎನ್.ಟಿ. ವಿಭಾಗದ ಮುಖ್ಯಸ್ಥರು ಶ್ರವಣ ಸಾಧನದ ನಿರುಪಯುಕ್ತತೆ ಕುರಿತು ನೀಡುವ ಪ್ರಮಾಣ ಪತ್ರದ ಆಧಾರದ ಮೇಲೆ 5 ವರ್ಷಗಳ ನಂತರ ಶ್ರವಣ ಸಾಧನವನ್ನು ಬದಲಾಯಿಸಲು ಅನುಮತಿಸಬಹುದಾಗಿದೆ. ಶ್ರವಣ ಸಾಧನದ ನಿರ್ವಹಣೆ ಮತ್ತು ದುರಸ್ತಿಯ ಜವಾಬ್ದಾರಿಯು ಸರ್ಕಾರಿ ನೌಕರನದ್ದಾಗಿರುತ್ತದೆ;

(v) ಶ್ರವಣ ಸಾಧನ ಖರೀದಿಗೆ ಅನುಮತಿಸಿರುವ ಕುರಿತಾದ ವಿವರಗಳನ್ನು ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರುಗಳು ನಿರ್ವಹಿಸತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**
ಸರ್ಕಾರದ ಉಪ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾನಿಯಮಗಳು–2)

## PERSONNEL AND ADMINISTRATIVE REFORMS SECRETARIAT

## NOTIFICATION

### No. DPAR 47 SMR 2012, Bangalore, dated: 09.07.2014

The draft of the following rules further to amend the Karnataka Government Servants' (Medial Attendance) Rules, 1963 which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act. 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore-560 001.

**DRAFT RULES**

1. **Title and commencement**:- (1) These rules may be called the Karnataka Government Servants' (Medical Attendance) (Amendment) Rules, 2014.

(2) It shall come into force from the date of its publication in the official Gazette.

**2. Amendment of Rule 14**:- In the Karnataka Government Servants' (Medical Attendance) Rules, 1963 in rule 14, in sub-rule (2) for clause (n) and entries relating thereto, the following shall be substituted, namely:-

**" (n) the reimbursement of the expenditure incurred on purchase of Hearing Aid shall be allowed twice during the entire service of the Government servant at the rates fixed by the Ministry of Health and Family Welfare, Government of India under the Central Government Health Services (CGHS) in the Office Memorandum No. S.14025/10/2002/MS, dated: 21.03.2012 subject to the following, namely:-**

**(i) the benefit of reimbursement of charges towards purchase of Hearing Aid shall be admissible to the Government Servant only and not to the members of his family;**

**(ii) the reimbursement of charges towards purchase of Hearing Aid shall be admissible on the basis of the certificate issued by the Head of ENT Department in a Government Hospital. The certificate shall specify the type of Hearing Aid suitable to the Government Servant;**

**(iii) the permission to procure Hearing Aid shall be granted by the concerned Head of the Department on the basis of recommendation of the Head of ENT Department in a Government Hospital and an undertaking that the Government Servant has not been reimbursed the cost of Hearing Aid in the preceding Five years;**

**(iv) the replacement of Hearing Aid may be permitted after five years on the basis of condemnation certificate issued by the Head of ENT Department in a Government Hospital. Maintenance and repair shall be the responsibility of the Government Servant; and**

**(v) record of permissions granted for procurement of Hearing Aid shall be maintained by the concerned Heads of the Department."**

By Order and in the name of the Governor of Karnataka,

**D. NAGESH PHATAK**
Deputy Secretary to Government,
Department of Personnel and Administrative Reforms
(Service Rules-2)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಜುಲೈ ೧೦, ೨೦೧೪ (ಆಷಾಢ ೧೯, ಶಕ ವರ್ಷ ೧೯೩೬) | ನಂ. ೪೫೩ |
|---|---|---|
| **Part – IV-A** | **Bangalore, Thursday, July 10, 2014 (Ashadha 19, Shaka Varsha 1936)** | **No. 453** |

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕವಿಪ:ಶಾರಶಾ:ಸ.ಉಚು:1407:2014, ಬೆಂಗಳೂರು, ದಿನಾಂಕ: 10ನೇ ಜುಲೈ, 2014**

ವಿಧಾನ ಪರಿಷತ್ತಿನ ಮಾನ್ಯ ಉಪ ಸಭಾಪತಿಯವರಾದ ಶ್ರೀಮತಿ ವಿಮಲಾಗೌಡ ಅವರು, ದಿನಾಂಕ: 10ನೇ ಜುಲೈ, 2014ರಂದು ಉಪ ಸಭಾಪತಿಯವರ ಸ್ಥಾನಕ್ಕೆ ರಾಜೀನಾಮೆಯನ್ನು ನೀಡಿರುತ್ತಾರೆ.

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

## KARNATAKA LEGISLATIVE COUNCIL SECRETARIAT

### NOTIFICATION

**No. KLC/Legn/DCE/1407/2014, Bangalore, Dated 10th July, 2014**

Smt. Vimala Gowda, Deputy Chairman, Karnataka Legislative Council has resigned to the office of the Deputy Chairman, Legislative Council on 10th July, 2014.

**V. SHREESH**
Secretary
Karnataka Legislative Council

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜುಲೈ ೧೧, ೨೦೧೪ (ಆಷಾಢ ೨೦, ಶಕ ವರ್ಷ ೧೯೩೬) | ನಂ. ೪೫೪ |
|---|---|---|
| **Part – IV-A** | **Bangalore, Friday, July 11, 2014 (Ashadha 20, Shaka Varsha 1936)** | **No. 454** |

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 152 ಭೂಸ್ವಾಬೆ 2013, ಬೆಂಗಳೂರು, ದಿನಾಂಕ: 11ನೇ ಜುಲೈ, 2014**

ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ನ್ಯಾಯೋಚಿತ ಪರಿಹಾರಕ್ಕೆ ಹಕ್ಕು, ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆ ಅಧಿನಿಯಮ, 2013 (2013ರ ಕೇಂದ್ರ ಅಧಿನಿಯಮ, 30)ರ 109ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ರಚಿಸಲು ಉದ್ದೇಶಿಸಿರುವ ಭೂ ಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ನ್ಯಾಯೋಚಿತ ಪರಿಹಾರಕ್ಕೆ ಹಕ್ಕು, ಪುನರ್ವಸತಿ ಮತ್ತು ಪುನರ್ ವ್ಯವಸ್ಥೆ ನಿಯಮಗಳು, 2014ರ ಕರಡನ್ನು ಅವುಗಳಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಸದರಿ ಅಧಿನಿಯಮದ 112ನೇ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಆಂಗ್ಲ ಭಾಷೆಯಲ್ಲಿ ದಿನಾಂಕ 21.06.2014ರಂದು 15 ದಿನಗಳ ಕಾಲಾವಕಾಶ ನೀಡಿ ಪ್ರಕಟಿಸಲಾಗಿದ್ದು, ಈಗ ಕನ್ನಡ ಭಾಷೆಯಲ್ಲಿ ಈ ಮೂಲಕ ಪ್ರಕಟಿಸಲಾಗಿದೆ ಹಾಗೂ ಸದರಿ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಅವುಗಳ ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಮೇಲೆ ನಿರ್ದಿಷ್ಟಪಡಿಸಿದ ಅವಧಿ ಮುಕ್ತಾಯವಾಗುವುದಕ್ಕೆ ಮುಂಚೆ ಸದರಿ ಕರಡು ನಿಯಮಾವಳಿಗೆ ಸಂಬಂಧಿಸಿದಂತೆ ಯಾರೇ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಗಳನ್ನು ಸರ್ಕಾರವು ಪರಿಗಣಿಸುತ್ತದೆ. ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಬಹುಮಹಡಿ ಕಟ್ಟಡ, ಡಾ.ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು – 560 001 ಇವರಿಗೆ ಸಲ್ಲಿಸಬಹುದು.

## ಕರಡು ನಿಯಮಗಳು

## ಅಧ್ಯಾಯ – I

## ಪ್ರಾರಂಭಿಕ

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಭೂ ಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ನ್ಯಾಯೋಚಿತ ಪರಿಹಾರಕ್ಕೆ ಹಕ್ಕು, ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆ (ಕರ್ನಾಟಕ) ನಿಯಮಗಳು, 2014 ಎಂದು ಕರೆಯಬಹುದು.

(2) ಇವು ಅಧಿಕೃತ ರಾಜ್ಯಪತ್ರದಲ್ಲಿ ಅವುಗಳ ಪ್ರಕಟಣೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

ಎ) **"ಅಧಿನಿಯಮ"** ಎಂದರೆ, ಭೂ ಸ್ವಾಧೀನ ಪ್ರಕ್ರಿಯೆಯಲ್ಲಿ, ಪಾರದರ್ಶಕತೆ ಮತ್ತು ನ್ಯಾಯೋಚಿತ ಪರಿಹಾರಕ್ಕೆ ಹಕ್ಕು, ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆ ಅಧಿನಿಯಮ, 2013 (2013ರ ಕೇಂದ್ರ ಅಧಿನಿಯಮ 30);

ಬಿ) **"ಜಿಲ್ಲಾಧಿಕಾರಿ"** ಎಂದರೆ, ರೆವಿನ್ಯೂ ಜಿಲ್ಲೆಯ ಜಿಲ್ಲಾಧಿಕಾರಿ ಮತ್ತು ಈ ಅಧಿನಿಯಮದ ಮೇರೆಗೆ ಜಿಲ್ಲಾಧಿಕಾರಿಯ ಕರ್ತವ್ಯಗಳನ್ನು ನಿರ್ವಹಿಸಲು ರಾಜ್ಯಸರ್ಕಾರವು ಅಧಿಕೃತಗೊಳಿಸಿದ ವಿಶೇಷ ಅಥವಾ ಅಪರ ಜಿಲ್ಲಾಧಿಕಾರಿ ಅಥವಾ ಉಪವಿಭಾಗಾಧಿಕಾರಿ ಮತ್ತು ಯಾರೇ ಇತರ ಅಧಿಕಾರಿಗಳನ್ನು ಒಳಗೊಳ್ಳುತ್ತದೆ;

ಸಿ) **"ನಮೂನೆ"** ಎಂದರೆ ಈ ನಿಯಮಗಳಿಗೆ ಸೇರಿಸಲಾದ ನಮೂನೆ;

ಡಿ) **"ಸಾಮಾಜಿಕ ಪರಿಣಾಮ ನಿರ್ಧರಣೆ"** ಎಂದರೆ, 4ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಮಾಡಿದ ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನ;

ಇ) **"ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನೆ"** ಎಂದರೆ, 4ನೇ ಪ್ರಕರಣದ (6)ನೇ ಉಪಪ್ರಕರಣದ ಮೇರೆಗೆ ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನವನ್ನು ನಡೆಸಿದ ಪ್ರಾಧಿಕಾರಿಯು ಸಿದ್ಧಪಡಿಸಿದ ಯೋಜನೆ;

ಎಫ್) **"ಗ್ರಾಮಸಭೆ"** ಎಂದರೆ, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (1993ರ ಕರ್ನಾಟಕ ಅಧಿನಿಯಮ 14)ರ 2ನೇ ಪ್ರಕರಣದ (16)ನೇ ಖಂಡದಲ್ಲಿ ಪರಿಭಾಷಿಸಲಾದ ಗ್ರಾಮಸಭೆ;

ಜಿ) **"ವಾರ್ಡ್ ಸಮಿತಿ"** ಎಂದರೆ, ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976ರಲ್ಲಿ ಪರಿಭಾಷಿಸಲಾದ ವಾರ್ಡ್ ಸಮಿತಿ;

(2) ಈ ನಿಯಮಗಳಲ್ಲಿ ಪರಿಭಾಷಿಸಿರದ, ಆದರೆ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಪರಿಭಾಷಿಸಿದ ಪದಗಳು ಮತ್ತು ಪದಾವಳಿಗಳು ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಅವುಗಳಿಗೆ ಅನುಕ್ರಮವಾಗಿ ಗೊತ್ತುಪಡಿಸಿದ ಅರ್ಥವನ್ನೇ ಹೊಂದಿರತಕ್ಕದ್ದು.

## ಅಧ್ಯಾಯ – II

## ಸಾಮಾಜಿಕ ಪರಿಣಾಮ ನಿರ್ಧರಣೆ

**3. ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನ.–** ರಾಜ್ಯ ಸರ್ಕಾರ ಅಥವಾ ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆಗಾಗಿ ಇರುವ ಕಮಿಷನರ್, ಈ ಅಧಿನಿಯಮದ ಉದ್ದೇಶಕ್ಕಾಗಿ, ಸಾಮಾಜಿಕ ಪರಿಣಾಮ ನಿರ್ಧರಣೆಯ ಸಮಾಲೋಚನೆ ಮತ್ತು ಅಧ್ಯಯನವನ್ನು ಪ್ರಾರಂಭಿಸುವ ಸಂಬಂಧದಲ್ಲಿ ನಮೂನೆ Iರ ಭಾಗ ಎ ಯಲ್ಲಿ ಸಾಮಾಜಿಕ ಪರಿಣಾಮ ನಿರ್ಧರಣೆಯನ್ನು ಕಾರ್ಯಗತಗೊಳಿಸುವುದಕ್ಕಾಗಿ ಅಧಿಸೂಚನೆಯನ್ನು ಹೊರಡಿಸತಕ್ಕದ್ದು ಮತ್ತು ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನ ಮತ್ತು ಅದರ ಪ್ರತಿಯು ಸ್ಥಳೀಯ ಪ್ರಾಧಿಕಾರಕ್ಕೆ ಸ್ಥಳೀಯ ಭಾಷೆಯಲ್ಲಿ ಲಭ್ಯವಾಗುವಂತೆ ಮಾಡತಕ್ಕದ್ದು ಮತ್ತು ಕಮಿಷನರ್ (ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆ), ಜಿಲ್ಲಾಧಿಕಾರಿ, ಉಪ ವಿಭಾಗಾಧಿಕಾರಿ, ವಿಶೇಷ ಭೂ ಸ್ವಾಧೀನಾಧಿಕಾರಿ, ಆಡಳಿತಾಧಿಕಾರಿ, ಸಂಬಂಧಪಟ್ಟ ತಹಸೀಲ್ದಾರ್ ಮತ್ತು ಸಂಬಂಧಿಸಿದ ಗ್ರಾಮ ಪಂಚಾಯತಿ ಕಚೇರಿಗಳಲ್ಲಿ ಸ್ಥಳೀಯ ಭಾಷೆಯಲ್ಲಿ ಲಭ್ಯವಾಗುವಂತೆ ಮಾಡತಕ್ಕದ್ದು ಮತ್ತು ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಪ್ರಚಾರ ಮಾಡಲು ಭಿತ್ತಿಪತ್ರ ಮತ್ತು ಕರ ಪತ್ರ ನಮೂನೆಗಳಲ್ಲಿ ಪ್ರಕಟಿಸತಕ್ಕದ್ದು ಮತ್ತು ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಎದ್ದುಕಾಣುವ ಸ್ಥಳದಲ್ಲಿ ಭಿತ್ತಿಪತ್ರಗಳನ್ನು ಅಂಟಿಸುವ ಮೂಲಕ ಪ್ರಕಟಿಸತಕ್ಕದ್ದು ಮತ್ತು ರಾಜ್ಯಸರ್ಕಾರವು ನಿರ್ಧರಿಸಿದಂತೆ ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿಯ ಮೂಲಕ ಸಾಮಾಜಿಕ ಪರಿಣಾಮ ನಿರ್ಧರಣೆಯನ್ನು ಕಾರ್ಯಗತಗೊಳಿಸುವುದಕ್ಕಾಗಿ ಪ್ರೊಸೆಸಿಂಗ್ ಫೀಜಿನ ಠೇವಣಿ ಇಟ್ಟ ತರುವಾಯದ ಮೂವತ್ತು ದಿನಗಳ ಒಳಗಾಗಿ ಅಂಥ ಅಧಿಸೂಚನೆಯನ್ನು ಹೊರಡಿಸತಕ್ಕದ್ದು, ಅದನ್ನು ಜಿಲ್ಲೆಯ ಅಥವಾ ರಾಜ್ಯ ಸರ್ಕಾರದ ವೆಬ್‌ಸೈಟ್‌ನಲ್ಲಿ ಅಪ್‌ಲೋಡ್ ಮಾಡತಕ್ಕದ್ದು:

ಪರಂತು, ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿಯು, ಸಾಮಾಜಿಕ ಪರಿಣಾಮ ನಿರ್ಧರಣಾ (ಎಸ್‌ಐಎ) ಅಧ್ಯಯನ ಸಂಬಂಧದ ಪ್ರೊಸೆಸಿಂಗ್ ಫೀಜನ್ನು ಠೇವಣಿ ಇಡದ ಪಕ್ಷದಲ್ಲಿ ಮತ್ತು ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆಗಾಗಿ ಇರುವ ಕಮೀಷನರ್‌ರ ಖಾತೆಯಲ್ಲಿ ಆಡಳಿತಾತ್ಮಕ ವೆಚ್ಚಗಳನ್ನು ಠೇವಣಿ ಇಡದ ಪಕ್ಷದಲ್ಲಿ, ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನವನ್ನು ಪ್ರಾರಂಭ ಮಾಡುವ ಅಂಥ ಅಧಿಸೂಚನೆಯನ್ನು ಹೊರಡಿಸತಕ್ಕದ್ದಲ್ಲ.

(2) ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನವು, ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರ, ಪಂಚಾಯಿತಿ, ಪುರಸಭೆ ಅಥವಾ ಪೌರಸಭಾ ನಿಗಮ, ಗ್ರಾಮಮಟ್ಟದಲ್ಲಿ ಅಥವಾ ವಾರ್ಡ್‌ಮಟ್ಟದಲ್ಲಿ ಸಂಬಂಧಪಟ್ಟವರೊಂದಿಗೆ ಸಮಾಲೋಚನೆಯನ್ನು ನಡೆಸತಕ್ಕದ್ದು, ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಸಾರ್ವಜನಿಕ ಅಹವಾಲನ್ನು ನಡೆಸುವುದಕ್ಕಾಗಿ ದಿನಾಂಕ ಮತ್ತು ಸಮಯ ಹಾಗೂ ಸ್ಥಳದ ಬಗ್ಗೆ ಸಾಕಷ್ಟು ಪ್ರಚಾರವನ್ನು ನೀಡುವ ಮೂಲಕ ಸಾರ್ವಜನಿಕ ಅಹವಾಲನ್ನು ನಡೆಸತಕ್ಕದ್ದು ಮತ್ತು ಅಲ್ಲಿನ ವ್ಯವಹರಣೆಗಳನ್ನು, ಸಂತ್ರಸ್ತ ಕುಟುಂಬಗಳ ಅಭಿಪ್ರಾಯಗಳನ್ನು ಲಿಖಿತದಲ್ಲಿ ದಾಖಲಿಸತಕ್ಕದ್ದು.

(3) ಸಾಮಾಜಿಕ ಪರಿಣಾಮ ನಿರ್ಧರಣಾ ವರದಿಯು ಪ್ರಾರಂಭವಾದ ದಿನಾಂಕದಿಂದ ಆರು ತಿಂಗಳ ಅವಧಿಯೊಳಗಾಗಿ ರಾಜ್ಯ ಸರ್ಕಾರಕ್ಕೆ ನಮೂನೆ–IIರಲ್ಲಿ ಸಲ್ಲಿಸತಕ್ಕದ್ದು ಮತ್ತು ಲಿಖಿತದಲ್ಲಿ ದಾಖಲಾದ ಸಂತ್ರಸ್ತ ಕುಟುಂಬಗಳ ಅಭಿಪ್ರಾಯಗಳು ಅದರಲ್ಲಿ ಒಳಗೊಂಡಿರತಕ್ಕದ್ದು.

(4) ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನೆಯು ಅಧಿನಿಯಮದ 4ನೇ ಪ್ರಕರಣದ (6)ನೇ ಉಪಪ್ರಕರಣದ ಮೇರೆಗೆ ಯೋಜನೆಯ ಪರಿಣಾಮವನ್ನು ತಿಳಿಸುವುದಕ್ಕಾಗಿ ತೆಗೆದುಕೊಳ್ಳಬೇಕಾದ ಸುಧಾರಣಾ ಕ್ರಮಗಳ ಪಟ್ಟಿಯನ್ನು ಸಹ ರಾಜ್ಯ ಸರ್ಕಾರಕ್ಕೆ ಸಾಮಾಜಿಕ ಪರಿಣಾಮ ನಿರ್ಧರಣಾ ವರದಿಯೊಂದಿಗೆ ನಮೂನೆ–III ರಲ್ಲಿ ಸಲ್ಲಿಸತಕ್ಕದು.

(5) ಸಾಮಾಜಿಕ ಪರಿಣಾಮ ನಿರ್ಧರಣೆ ವರದಿಯು ಮತ್ತು ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನೆಯು, ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿನ ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರ, ಪಂಚಾಯತ್, ಪುರಸಭೆ ಅಥವಾ ನಗರಪಾಲಿಕೆಗಳ, ಗ್ರಾಮಮಟ್ಟದಲ್ಲಿ ಅಥವಾ ವಾರ್ಡ್ ಮಟ್ಟದಲ್ಲಿ ಮತ್ತು ಜಿಲ್ಲಾಧಿಕಾರಿಗಳ, ಉಪ–ವಿಭಾಗಾಧಿಕಾರಿಗಳ, ವಿಶೇಷ ಭೂಸ್ವಾಧೀನಾಧಿಕಾರಿಗಳ, ಆಡಳಿತಾಧಿಕಾರಿ, ತಹಸೀಲ್ದಾರ್ ಮತ್ತು ಗ್ರಾಮ ಪಂಚಾಯಿತಿಯ ಕಚೇರಿಗಳಲ್ಲಿ ಸ್ಥಳೀಯ ಭಾಷೆಯಲ್ಲಿ ಲಭ್ಯವಿರುವಂತೆ ಮಾಡತಕ್ಕದ್ದು ಮತ್ತು ರಾಜ್ಯಸರ್ಕಾರದ ವೆಬ್‌ಸೈಟಿನಲ್ಲಿ ಸಹ ಅಪ್‌ಲೋಡ್ ಮಾಡತಕ್ಕದ್ದು.

**4. ಸಾಮಾಜಿಕ ಪರಿಣಾಮ ನಿರ್ಧರಣೆಗಾಗಿ ಸಾಂಸ್ಥಿಕ ಬೆಂಬಲ ಮತ್ತು ಸೌಲಭ್ಯ ಕಲ್ಪಿಸುವುದು.**– ರಾಜ್ಯ ಸರ್ಕಾರವು, ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆಗಾಗಿನ ಕಮಿಷನರ್‌ರ ಮುಖಾಂತರ ಸ್ವತಂತ್ರ್ಯವಾದ ಸಂಸ್ಥೆಯನ್ನು (ಇಲ್ಲಿ ಇನ್ನು ಮುಂದೆ ರಾಜ್ಯ ಸಾಮಾಜಿಕ ಪರಿಣಾಮ ನಿರ್ಧರಣೆ ಘಟಕವೆಂದು ಉಲ್ಲೇಖಿಸಲಾಗಿದೆ) ಮತ್ತು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳೊಂದಿಗೆ ಸಮಾಲೋಚಿಸಿ ಇತರ ಜಿಲ್ಲಾ ಸಾಮಾಜಿಕ ಪರಿಣಾಮ ನಿರ್ಧರಣಾ ಘಟಕಗಳನ್ನು ಗುರುತಿಸತಕ್ಕದ್ದು ಅಥವಾ ರಚಿಸತಕ್ಕದ್ದು, ಹೀಗೆ ಗುರುತಿಸಲಾದ ಅಥವಾ ರಚಿಸಲಾದ ಘಟಕಗಳು ಈ ಅಧಿನಿಯಮದ ಮೇರೆಗೆ ಭೂ ಸ್ವಾಧೀನದ ಎಲ್ಲ ಪ್ರಕರಣಗಳಿಗಾಗಿ, ಅಧಿನಿಯಮದ ಉಪಬಂಧಗಳಲ್ಲಿರುವಂತೆ ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿಗಳನ್ನು ಹೊರತುಪಡಿಸಿದ ಅಂಥ ವ್ಯಕ್ತಿಗಳು ಅಥವಾ ನಿಕಾಯಗಳ ಮೂಲಕ ಸಾಮಾಜಿಕ ಪರಿಣಾಮ ನಿರ್ಧರಣಾ ಕಾರ್ಯವನ್ನು ಅಧಿಕೃತವಾಗಿ ಮಾಡಲು ಮತ್ತು ನಡೆಸಲು ಖಚಿತಪಡಿಸುವ ಹೊಣೆಯನ್ನು ಹೊಂದಿರತಕ್ಕದ್ದು.

(2) ರಾಜ್ಯ ಸಾಮಾಜಿಕ ಪರಿಣಾಮ ನಿರ್ಧರಣೆಯ ಘಟಕವು ಜಿಲ್ಲಾ ಸಾಮಾಜಿಕ ಪರಿಣಾಮ ನಿರ್ಧರಣಾ ಘಟಕಗಳ ನೆರವಿನೊಂದಿಗೆ ಈ ಮುಂದಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ:–

(ಎ) ಸಾಮಾಜಿಕ ಪರಿಣಾಮ ನಿರ್ಧರಣಾ ಸಂಪನ್ಮೂಲ ಪಾಲುದಾರರು ಮತ್ತು ವೃತ್ತಿಗಾರರು ರಾಜ್ಯದ ಮತ್ತು ಜಿಲ್ಲೆಯ ದತ್ತಾಂಶ ಸಂಗ್ರಹವನ್ನು ಅಭಿವೃದ್ಧಿಗೊಳಿಸುವುದು ಮತ್ತು ನಿರಂತರವಾಗಿ ವಿಸ್ತರಿಸುವುದು, ಅದು ಭೂ ಸ್ವಾಧೀನ ಮತ್ತು ಪುನರ್ ವಸತಿ ಹಾಗೂ ಪುನರ್ ವ್ಯವಸ್ಥೆಗಾಗಿ ಸಾಮಾಜಿಕ ಪರಿಣಾಮ ನಿರ್ಧರಣೆಗಳನ್ನು ನಡೆಸುವುದಕ್ಕೆ ಅಗತ್ಯವಾದ ಕೌಶಲ್ಯ ಮತ್ತು ಸಾಮರ್ಥ್ಯಗಳೊಂದಿಗೆ ವೈಯಕ್ತಿಕವಾಗಿ ಮತ್ತು ಸಂಸ್ಥೆಗಳಾಗಿ ಸಂಪರ್ಕಜಾಲದಂತೆ ಕಾರ್ಯನಿರ್ವಹಿಸತಕ್ಕದ್ದು.

(ಬಿ) ರಾಜ್ಯ ಸರ್ಕಾರದ ಕೋರಿಕೆಯ ಮೇಲೆ, ಪ್ರಾಜೆಕ್ಟ್‌ನ–ನಿರ್ದಿಷ್ಟ ಪರಿಶೀಲನಾಂಶಗಳನ್ನು (ಇದರಲ್ಲಿ ಇನ್ನು ಮುಂದೆ ಟಿಓಆರ್ ಎಂದು ಉಲ್ಲೇಖಿಸಲಾಗಿದೆ) ಸಿದ್ಧಪಡಿಸುವ ಮೂಲಕ ಸಾಮಾಜಿಕ ಪರಿಣಾಮ ನಿರ್ಧರಣೆಯನ್ನು ಕೂಡಲೇ ನಡೆಸುವುದು;

(ಸಿ) ಸಾಮಾಜಿಕ ಪರಿಣಾಮ ನಿರ್ಧರಣಾ ತಂಡಕ್ಕೆ ಮತ್ತು ಸಮುದಾಯದ ಸಮೀಕ್ಷಕರುಗಳಿಗಾಗಿ ತರಬೇತಿ ಮತ್ತು ಸಂವರ್ಧನ ಕಾರ್ಯಕ್ರಮಗಳನ್ನು ನಡೆಸುವುದು ಮತ್ತು ವಿಶ್ಲೇಷಣೆಗಾಗಿ ಅಗತ್ಯವಿರುವ ಕೈಪಿಡಿಗಳು, ಸಾಧನ ಸಾಮಗ್ರಿಗಳು, ತೌಲನಿಕ ವಿಷಯ ಅಧ್ಯಯನ ವರದಿಗಳು ಮತ್ತು ಇತರ ಸಾಮಗ್ರಿಗಳು ಲಭ್ಯವಾಗುವಂತೆ ಮಾಡುವುದು;

(ಡಿ) ಸಾಮಾಜಿಕ ಪರಿಣಾಮ ನಿರ್ಧರಣಾ ಪ್ರಕ್ರಿಯೆಯ ಅವಧಿಯಲ್ಲಿ ಅಗತ್ಯವಾದ ನೆರವು ಮತ್ತು ಸೂಕ್ತವಾದ ನಿರ್ದೇಶನಗಳನ್ನು ನೀಡುವುದು;

(ಇ) ಸಾಮಾಜಿಕ ಪರಿಣಾಮ ನಿರ್ಧರಣೆಗಳಿಗಾಗಿ ಮತ್ತು ಭೂ ಸ್ವಾಧೀನ ವ್ಯವಸ್ಥಾಪನಾ ಮಾಹಿತಿ ವ್ಯವಸ್ಥೆಗಾಗಿ ಮತ್ತು ಪುನರ್‌ವಸತಿ ಹಾಗೂ ಪುನರ್‌ವ್ಯವಸ್ಥೆ ನಿರ್ವಹಣೆಗಾಗಿ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಸಂಬಂಧಪಟ್ಟ ಎಲ್ಲ ದಸ್ತಾವೇಜುಗಳನ್ನು ಪ್ರಕಟಿಸುವುದಕ್ಕಾಗಿ ವೆಬ್–ಆಧಾರಿತ ಕೆಲಸ ನಿರ್ವಹಣೆಗೆ ವರ್ಗಾಯಿಸುವುದನ್ನು ಖಚಿತಪಡಿಸುವುದು;

(ಎಫ್) ಎಲ್ಲ ಸಾಮಾಜಿಕ ಪರಿಣಾಮ ನಿರ್ಧರಣೆಗಳ ಮತ್ತು ಇದರೊಂದಿಗಿರುವ ಪ್ರಾಥಮಿಕ ಸಾಮಗ್ರಿಗಳ ಒಂದು ಪಟ್ಟಿಯನ್ನು ನಿರ್ವಹಿಸುವುದು; ಮತ್ತು

(ಜಿ) ಸಾಮಾಜಿಕ ಪರಿಣಾಮ ನಿರ್ಧರಣಾ ಗುಣಮಟ್ಟವನ್ನು ನಿರಂತರವಾಗಿ ಪರಿಷ್ಕರಿಸುವುದು, ಮೌಲೀಕರಿಸುವುದು ಮತ್ತು ಬಲಪಡಿಸುವುದು ಮತ್ತು ರಾಜ್ಯಾದ್ಯಂತ ಲಭ್ಯವಿರುವ ಸಾಮರ್ಥ್ಯಗಳನ್ನು ನಿರ್ವಹಿಸುವುದು.

**5. ಪ್ರಾಜೆಕ್ಟ್–ನಿರ್ದಿಷ್ಟ ಪರಿಶೀಲನಾಂಶಗಳು (ಟಿಓಆರ್) ಮತ್ತು ಸಾಮಾಜಿಕ ಪರಿಣಾಮ ನಿರ್ಧರಣೆ (ಎಸ್‌ಐಎ)ಗಾಗಿ ಪ್ರೊಸೆಸಿಂಗ್ ಫೀಜು.**– (1) ರಾಜ್ಯ ಸರ್ಕಾರವು ಭೂಸ್ವಾಧೀನ ಮಾಡಲು ಇಚ್ಛಿಸಿದ್ದರೆ ಅಂಥ ಭೂಸ್ವಾಧೀನಕ್ಕಾಗಿ ರಾಜ್ಯ ಸಾಮಾನ್ಯ ನಿರ್ಧರಣಾ ಘಟಕಕ್ಕೆ ಎಲ್ಲ ಸಂಬಂಧಪಟ್ಟ ದಸ್ತಾವೇಜುಗಳೊಂದಿಗೆ ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿಯ ಮೂಲಕ ಪ್ರಸ್ತಾವವನ್ನು ಸಲ್ಲಿಸತಕ್ಕದ್ದು, ಆ ದಸ್ತಾವೇಜುಗಳು,–

(ಎ) ಭೂಸ್ವಾಧೀನತೆಯ ಪ್ರತಿಯೊಂದು ಪ್ರಸ್ತಾವನೆಗಾಗಿ ಪ್ರಾಜೆಕ್ಟ್–ನಿರ್ದಿಷ್ಟ ಪರಿಶೀಲನಾಂಶಗಳ ವಿವರಗಳನ್ನು ಸಿದ್ಧಪಡಿಸುವುದು, ಎಲ್ಲ ಚಟುವಟಿಕೆಗಳನ್ನು ಪಟ್ಟಿ ಮಾಡುವುದು, ತಂಡದ ಗಾತ್ರವನ್ನು (ಮತ್ತು ಕ್ಷೇತ್ರ ತಂಡಗಳ ಸಂಖ್ಯೆ) ಮತ್ತು ತಂಡದ ಸದಸ್ಯರ ವಿವರಗಳನ್ನು ಯುಕ್ತವಾಗಿ ಸೂಚಿಸಬೇಕು ಮತ್ತು ನಮೂನೆ–I ರ ಭಾಗ–ಬಿ ಯಲ್ಲಿ ಸಾಮಾಜಿಕ ಪರಿಣಾಮ ನಿರ್ಧರಣೆಗಾಗಿ ಪ್ರಧಾನ ಆಂಶಗಳನ್ನು ತಿಳಿಸುವ ಸಂಬಂಧದಲ್ಲಿ ಅನುಸೂಚಿಯನ್ನು ಮತ್ತು ಅಂತಿಮ ಗಡುವನ್ನು ನಿರ್ದಿಷ್ಟಪಡಿಸುವುದು;

(ಬಿ) ಪ್ರತಿಯೊಂದು ಬಾಬಿಗಾಗಿ ಅಥವಾ ಚಟುವಟಿಕೆಗಾಗಿ ಹಂತ ಹಂತವಾಗಿ ಫೀಜಿನ ಸ್ಪಷ್ಟತೆಯೊಂದಿಗೆ ಪರಿಶೀಲನಾಂಶಗಳ ಆಧಾರದ ಮೇಲೆ ಸಾಮಾಜಿಕ ಪರಿಣಾಮ ನಿರ್ಧರಣೆಯ ಫೀಜನ್ನು ಅಂದಾಜಿಸಿ ನಿರ್ಧರಿಸುವುದು. ಫೀಜಿನ ಮೊಬಲಗು, ರಾಜ್ಯ ಸರ್ಕಾರವು

ನಿರ್ದಿಷ್ಟಪಡಿಸಿದ ಮಾನದಂಡಗಳೂ ಒಳಗೊಂಡಂತೆ ಪ್ರದೇಶ, ಪ್ರಾಜೆಕ್ಟ್‌ನ ವಿಧಾನ ಮತ್ತು ಸಂತ್ರಸ್ತ ಕುಟುಂಬಗಳ ಸಂಖ್ಯೆಗಳ ಮೇಲೆ ಆಧಾರಿತವಾಗಿರತಕ್ಕದ್ದು.

(2) ಸಾಮಾಜಿಕ ಪರಿಣಾಮ ನಿರ್ಧರಣಾ ಫೀಜಿನ ಶೇ.10ರಷ್ಟನ್ನು, ಪರಿಶೀಲನಾಂಶಗಳನ್ನು ಸಿದ್ಧಪಡಿಸುವುದಕ್ಕಾಗಿ (ಟಿಓಆರ್) ಆಡಳಿತಾತ್ಮಕ ವೆಚ್ಚದ ರೂಪದಲ್ಲಿ ರಾಜ್ಯ ಸಾಮಾಜಿಕ ಪರಿಣಾಮ ನಿರ್ಧರಣಾ ಘಟಕಕ್ಕೆ ಹಂಚಿಕೆ ಮಾಡತಕ್ಕದ್ದು ಮತ್ತು ಸಾಮಾಜಿಕ ಪರಿಣಾಮ ನಿರ್ಧರಣಾ ವರದಿಯ ಫೀಜನ್ನು ಅಂದಾಜಿಸುವುದು ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(3) ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿಯು, ರಾಜ್ಯ ಸರ್ಕಾರವು ಈ ಉದ್ದೇಶಕ್ಕಾಗಿ ಅಧಿಸೂಚಿಸಿದ ಬ್ಯಾಂಕ್ ಖಾತೆಯಲ್ಲಿ ಸಾಮಾಜಿಕ ಪರಿಣಾಮ ನಿರ್ಧರಣೆ ಫೀಜಿನೊಂದಿಗೆ ಕಮಿಷನರ್‌ರ (ಪುನರ್‌ವಸತಿ ಮತ್ತು ಪುನರ್‌ವ್ಯವಸ್ಥೆ) ಆಡಳಿತಾತ್ಮಕ ವೆಚ್ಚವನ್ನು ಠೇವಣಿ ಇಡತಕ್ಕದ್ದು.

**6. ಸಾಮಾಜಿಕ ಪರಿಣಾಮ ನಿರ್ಧರಣಾ ಏಜೆನ್ಸಿಯ ಆಯ್ಕೆ.–** (1) ರಾಜ್ಯ ಸಾಮಾಜಿಕ ಪರಿಣಾಮ ನಿರ್ಧರಣಾ ಘಟಕವು, ರಾಜ್ಯ ದತ್ತಾಂಶದಲ್ಲಿ ನೋಂದಾಯಿತವಾದ ಅಥವಾ ದಾಖಲಾದ ಸಾಮಾಜಿಕ ಪರಿಣಾಮ ನಿರ್ಧರಣಾ ಸಂಪನ್ಮೂಲ ಪಾಲುದಾರರಿಂದ ಮತ್ತು ವೃತ್ತಿಗರಿಂದ, ವ್ಯಕ್ತಿಗಳಿಂದ ಮತ್ತು ಸಂಸ್ಥೆಗಳಿಂದ ಪ್ರತಿಯೊಂದು ಪ್ರಾಜೆಕ್ಟ್‌ಗಾಗಿ ಸಾಮಾಜಿಕ ಪರಿಣಾಮ ನಿರ್ಧರಣಾ ಏಜೆನ್ಸಿಯನ್ನು ಆಯ್ಕೆ ಮಾಡುವುದಕ್ಕೆ ಹೊಣೆಯಾಗಿರತಕ್ಕದ್ದು. ಈ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯಗಳ ಮತ್ತು ಕಾಲೇಜುಗಳ, ಸರ್ಕಾರೇತರ ಸಂಸ್ಥೆಗಳ ಮತ್ತು ಸಂಶೋಧನಾ ಸಂಸ್ಥೆಗಳ ಸೇವೆಯನ್ನು ಪಡೆದುಕೊಳ್ಳುವುದು.

(2) ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿಯು, ಸಾಮಾಜಿಕ ಪರಿಣಾಮ ನಿರ್ಧರಣೆಯನ್ನು ನಡೆಸಲು ಸಾಮಾಜಿಕ ಪರಿಣಾಮ ನಿರ್ಧರಣೆ ಏಜೆನ್ಸಿಯ ಆಯ್ಕೆ ಮಾಡುವಾಗ ಯಾವುದೇ ರೀತಿಯಲ್ಲಿ ಭಾಗಿಯಾಗತಕ್ಕದ್ದಲ್ಲ.

(3) ಸಾಮಾಜಿಕ ಪರಿಣಾಮ ನಿರ್ಧರಣೆಯ ಏಜೆನ್ಸಿಗಾಗಿ ಪ್ರಮಾಣ ಮತ್ತು ಆಯ್ಕೆಯ ಮಾನದಂಡವು, ರಾಜ್ಯ ಸಾಮಾಜಿಕ ಪರಿಣಾಮ ನಿರ್ಧರಣೆಯ ಘಟಕವು ಅಭಿವೃದ್ಧಿಪಡಿಸಲಾದ ಮತ್ತು ನಿರ್ದಿಷ್ಟಪಡಿಸಲಾದ ಪ್ರಾಜೆಕ್ಟ್–ನಿರ್ದಿಷ್ಟ ಪರಿಶೀಲನಾಂಶಗಳಿಗೆ ಅನುಸಾರವಾಗಿ ಇರತಕ್ಕದ್ದು.

(4) ಸಾಮಾಜಿಕ ಪರಿಣಾಮ ನಿರ್ಧರಣೆಗಳ ಅಥವಾ ಸಂಬಂಧಿತ ಕ್ಷೇತ್ರ ಆಧಾರಿತ ನಿರ್ಧರಣೆಗಳನ್ನು ನಡೆಸಲು ಅನುಭವ ಹೊಂದಿರುವ ವ್ಯಕ್ತಿಗಳನ್ನು ಅಥವಾ ಸಂಸ್ಥೆಯನ್ನು ನೇಮಕ ಮಾಡುವ ಮೂಲಕ ರಚಿಸಬಹುದು ಮತ್ತು ಈ ತಂಡವು,–

(ಎ) ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿಯಲ್ಲಿ ನೇರವಾಗಿ ಸಂಪರ್ಕ ಹೊಂದಿಲ್ಲದ ಸ್ವತಂತ್ರ ವೃತ್ತಿಗರು, ಸಾಮಾಜಿಕ ಕಾರ್ಯಕರ್ತರು, ವಿದ್ವಾಂಸರು, ತಾಂತ್ರಿಕ ತಜ್ಞರ ಒಂದು ಸಂಯೋಜನೆಯನ್ನು; ಮತ್ತು

(ಬಿ) ಕನಿಷ್ಠ ಪಕ್ಷ ಒಬ್ಬ ಮಹಿಳಾ ಸದಸ್ಯರನ್ನು

– ಒಳಗೊಂಡಿರಬಹುದು.

(5) ಒಂದು ತಂಡದ ನಾಯಕನು, ನಿರ್ಧರಣಾ ಅವಧಿಯಲ್ಲಿ ರಾಜ್ಯ ಸಾಮಾಜಿಕ ಪರಿಣಾಮ ನಿರ್ಧರಣಾ ಘಟಕದೊಂದಿಗೆ ಸಂಪರ್ಕ ಇಟ್ಟುಕೊಳ್ಳಲು ಸಾಮಾಜಿಕ ಪರಿಣಾಮ ನಿರ್ಧರಣಾ ತಂಡದ ಸದಸ್ಯರ ಪೈಕಿಯಿಂದ ಒಬ್ಬರನ್ನು ನೇಮಕ ಮಾಡತಕ್ಕದ್ದು;

(6) ಸಾಮಾಜಿಕ ಪರಿಣಾಮ ನಿರ್ಧರಣಾ ತಂಡವನ್ನು ಆಯ್ಕೆ ಮಾಡುವಾಗ, ಸಂಬಂಧಿಸಿದ ಪ್ರಾಜೆಕ್ಟ್‌ನ ನಿರ್ಧರಣೆಗೆ ಆಯ್ಕೆಗೊಂಡ ತಂಡದ ಸದಸ್ಯರುಗಳು ಯಾವುದೇ ವಿರೋಧ ಹಿತಾಸಕ್ತಿಯನ್ನು ಹೊಂದಿಲ್ಲದಿರುವುದನ್ನು ಖಚಿತಪಡಿಸಬಹುದಾಗಿದೆ.

(7) ಯಾವುದೇ ಹಂತದಲ್ಲಿ, ತಂಡದ ಯಾರೇ ಸದಸ್ಯ ಅಥವಾ ತಂಡದ ಸದಸ್ಯನ ಯಾರೇ ಕುಟುಂಬ ಸದಸ್ಯನು ಪ್ರಾಜೆಕ್ಟ್‌ನಲ್ಲಿ ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿಯಿಂದ ಅಥವಾ ಯಾರೇ ಇತರ ಮಧ್ಯಸ್ಥದಾರನಿಂದ ಯಾವುದೇ ಪ್ರಯೋಜನವನ್ನು ನೇರವಾಗಿ ಅಥವಾ ಪರೋಕ್ಷವಾಗಿ ಪಡೆದುಕೊಂಡಿರುವುದು ಕಂಡು ಬಂದರೆ, ಸದರಿ ಸದಸ್ಯನನ್ನು, ಅಂಥ ಸದಸ್ಯನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ಕೊಟ್ಟ ತರುವಾಯ ಕೂಡಲೆ ಅವನನ್ನು ತೆಗೆದುಹಾಕತಕ್ಕದ್ದು.

**7. ಸಾಮಾಜಿಕ ಪರಿಣಾಮ ನಿರ್ಧರಣೆಯನ್ನು ನಡೆಸುವ ಕಾರ್ಯವಿಧಾನ.–** (1) ಸಾಮಾಜಿಕ ಪರಿಣಾಮ ನಿರ್ಧರಣೆ ತಂಡವು, ಪರಿಮಾಣಾತ್ಮಕ ಮತ್ತು ಗುಣಾತ್ಮಕ ಭೂಮಿಯ ಡಾಟಾ ಸಂಗ್ರಹಿಸತಕ್ಕದ್ದು ಮತ್ತು ವಿಶ್ಲೇಷಿಸತಕ್ಕದ್ದು, ಸ್ಥಳ ಭೇಟಿ ನೀಡಿರುವ ಬಗ್ಗೆ ಸವಿವರವಾದ ವಿವರಗಳನ್ನು ತೆಗೆದುಕೊಳ್ಳತಕ್ಕದ್ದು. ಸಾಮಾಜಿಕ ಪರಿಣಾಮ ನಿರ್ಧರಣೆ ವರದಿಯನ್ನು ಸಿದ್ಧಪಡಿಸುವಲ್ಲಿ ಅಂಥ ಸಂಯೋಜಿತ ಗುಂಪು ಚರ್ಚೆಗಳು, ಭಾಗವಹಿಸುವಿಕೆಯ ಗ್ರಾಮೀಣ ಮೌಲ್ಯ ನಿರ್ಣಯ ತಂತ್ರಗಳು ಮತ್ತು ಬಾತ್ಮೀದಾರ ಸಂದರ್ಶನಗಳಂಥ ಸಹಯೋಗ ವಿಧಾನಗಳನ್ನು ಬಳಸತಕ್ಕದ್ದು.

(2) ಎಲ್ಲ ಸಂಬಂಧಪಟ್ಟ ಪ್ರಾಜೆಕ್ಟ್ ವರದಿಗಳನ್ನು ಮತ್ತು ಸಾಧ್ಯತಾ ಅಧ್ಯಯನಗಳನ್ನು ಅಗತ್ಯಪಡಿಸಲಾದಂತೆ ಸಾಮಾಜಿಕ ಪರಿಣಾಮ ನಿರ್ಧರಣೆ ನಡೆಸುವ ಮುಖಾಂತರವಾಗಿ ಸಾಮಾಜಿಕ ಪರಿಣಾಮ ನಿರ್ಧರಣೆ ತಂಡಕ್ಕೆ ಲಭ್ಯವಾಗುವಂತೆ ಮಾಡತಕ್ಕದ್ದು. ಸಾಮಾಜಿಕ ಪರಿಣಾಮ ನಿರ್ಧರಣೆ ತಂಡದಿಂದ ಮಾಹಿತಿಯನ್ನು ಕೋರುವ ಸಂಬಂಧದಲ್ಲಿ ಯಾವುದೇ ಮನವಿಯನ್ನು 7 ದಿನಗಳು ಮೀರದಂತೆ ಆದಷ್ಟು ಬೇಗನೆ ಒದಗಿಸತಕ್ಕದ್ದು. ಜಿಲ್ಲಾಧಿಕಾರಿ ಅಥವಾ ಯಾರೇ ಅಧಿಕೃತ ಅಧಿಕಾರಿಯು ಸಾಧ್ಯವಾಗಬಹುದಾದಷ್ಟು ಬೇಗನೆ ಸಾಮಾಜಿಕ ಪರಿಣಾಮ ನಿರ್ಧರಣೆ ತಂಡವು ಕೋರಿದ ಮಾಹಿತಿಯನ್ನು ಒದಗಿಸತಕ್ಕದ್ದು.

(3) ಎಲ್ಲ ಸಂಬಂಧಪಟ್ಟ ಭೂಮಿಯ ದಾಖಲೆಗಳು ಮತ್ತು ಡಾಟಾ, ಕ್ಷೇತ್ರ ಪರಿಶೀಲನೆ ಮತ್ತು ಪರಿಶೀಲನೆ ಮತ್ತು ಇದೇ ರೀತಿಯ ಯೋಜನೆಗಳೊಂದಿಗೆ ಹೋಲಿಕೆ ಮಾಡುವುದರ ಮೂಲಕ ಅದರ ಆಧಾರದ ಮೇಲೆ ಸವಿವರವಾದ ನಿರ್ಧರಣೆಯನ್ನು ಸಾಮಾಜಿಕ ಪರಿಣಾಮ ನಿರ್ಧರಣೆ ತಂಡವು ನಡೆಸತಕ್ಕದ್ದು. ಮೌಲ್ಯ ಮಾಪನವನ್ನು ಈ ಮುಂದಿನಂತೆ ನಿರ್ಧರಿಸತಕ್ಕದ್ದು, ಎಂದರೆ,–

(ಎ) ಸ್ವಾಧೀನಪಡಿಸಿಕೊಳ್ಳುವ ಭೂಮಿ ಮತ್ತು ಪ್ರಾಜೆಕ್ಟ್‌ನ ಪರಿಸರಾತ್ಮಕ, ಸಾಮಾಜಿಕ ಅಥವಾ ಇತರ ಪರಿಣಾಮಗಳಿಂದ ಬಾಧಿತವಾಗಬಹುದಾದ ಪ್ರದೇಶಗಳೆರಡು ಒಳಗೊಂಡಂತೆ ಪ್ರಸ್ತಾವಿತ ಪ್ರಾಜೆಕ್ಟ್‌ನ ಮೇರೆಗೆ ಪರಿಣಾಮದ ಒಟ್ಟು ಪ್ರದೇಶ;

(ಬಿ) ಪ್ರಾಜೆಕ್ಟ್‌ಗಾಗಿ ಸ್ವಾಧೀನಪಡಿಸಿಕೊಳ್ಳಬಹುದಾದ ಪ್ರಸ್ತಾವಿತ ಭೂಮಿಯ ಪ್ರಮಾಣ ಮತ್ತು ಸ್ಥಳ;

(ಸಿ) ಸ್ವಾಧೀನಕ್ಕಾಗಿ ಉದ್ದೇಶಿಸಲಾದ ಅಗತ್ಯಪಡಿಸಿದ ಭೂಮಿಯ ಕನಿಷ್ಠ ಖಾಲಿ ಭೂಮಿ;

(ಡಿ) ಪ್ರಾಜೆಕ್ಟ್ ಮತ್ತು ಅನುಕೂಲತೆಗೆ ಸಾಧ್ಯವಾಗಬಹುದಾದ ಪರ್ಯಾಯ ನಿವೇಶನಗಳು ಅಥವಾ ಸ್ಥಳ;

(ಇ) ಅನುಸೂಚಿತ ಪ್ರದೇಶದಲ್ಲಿ ಸ್ವಾಧೀನತೆಗಾಗಿ ಪ್ರಸ್ತಾವಿತ ಭೂಮಿಯನ್ನು ಪ್ರಾತ್ಯಕ್ಷತೆ ಮಾಡಬಹುದಾದ ಸ್ಥಳವಾಗಿದೆಯೆ;

(ಎಫ್) ಪ್ರಾಜೆಕ್ಟ್‌ಗಾಗಿ ಅಗತ್ಯವಿರುವ ಭೂಮಿಯನ್ನು ಈಗಾಗಲೆ ಖರೀದಿಸಿದ, ಪರಭಾರೆ ಮಾಡಿದ, ಗುತ್ತಿಗೆ ನೀಡಿದ ಅಥವಾ ಸ್ವಾಧೀನಪಡಿಸಿಕೊಂಡ ಮತ್ತು ಪ್ರತಿಯೊಂದು ಪ್ಲಾಟ್‌ಗಾಗಿ ಬಳಸಿಕೊಳ್ಳಲು ಉದ್ದೇಶಿಸಲಾದ ಯಾವುದಾದರೂ ಭೂಮಿ ಇದ್ದರೆ;

(ಜಿ) ಪ್ರಾಜೆಕ್ಟ್‌ಗಾಗಿ ಬಳಸಿಕೊಂಡಿಲ್ಲದ ಭೂಮಿಯನ್ನು ಯಾವುದೇ ಸಾರ್ವಜನಿಕ ಕಾರ್ಯಕ್ಕಾಗಿ ಬಳಸಿಕೊಳ್ಳುವ ಸಾಧ್ಯತೆ ಇದ್ದರೆ ಮತ್ತು ಅಂಥ ಯಾವುದೇ ಭೂಮಿಯು ಅಧಿಭೋಗದ ಅಧೀನದಲ್ಲಿದ್ದರೆ;

(ಹೆಚ್) ಭೂಮಿಯ ಸ್ವರೂಪ, ಭೂಮಿಯ ಪ್ರಸ್ತುತ ಬಳಕೆ ಮತ್ತು ಭೂಮಿಯ ವರ್ಗೀಕರಣ ಮತ್ತು ಸದರಿ ಭೂಮಿಯಲ್ಲಿ ನೀರಾವರಿಗೆ ಒಳಪಟ್ಟ ಜಮೀನು ಮತ್ತು ಬೆಳೆ ಪದ್ಧತಿ;

(ಐ) ಆಹಾರ ಭದ್ರತೆಯ ಸಂಬಂಧದಲ್ಲಿ ವಿಶೇಷ ಉಪಬಂಧಗಳನ್ನು ಪ್ರಸ್ತಾವಿತ ಭೂ ಸ್ವಾಧೀನತೆಯಲ್ಲಿ ಅನುಸರಿಸಲಾಗಿದೆಯೆ;

(ಜೆ) ಪ್ರಸ್ತಾವಿತ ಭೂಮಿಯಲ್ಲಿ ಮತ್ತು ಸ್ಥಿರಾಸ್ತಿಗಳಲ್ಲಿ ಲಭ್ಯವಾಗಬಹುದಾದ ಅಥವಾ ಒದಗಿಸಬೇಕಾದ ಮೂಲಭೂತ ಸೌಲಭ್ಯ, ಹಿಡುವಳಿಗಳ ಸಂಖ್ಯೆ, ಮಾಲೀಕತ್ವದ ವಿಧಾನಗಳು, ಭೂ ಹಂಚಿಕೆ, ವಾಸದ ಗೃಹಗಳ ಸಂಖ್ಯೆ (ಸರ್ಕಾರಿ ಮತು ಖಾಸಗಿ); ಮತ್ತು

(ಕೆ) ಕಳೆದ ಮೂರು ವರ್ಷಗಳಲ್ಲಿ ಭೂಮಿಯ ಬೆಲೆ ಮತ್ತು ಮಾಲೀಕತ್ವದಲ್ಲಿ, ಇತ್ತೀಚಿನ ಬದಲಾವಣೆಗಳು ವರ್ಗಾವಣೆ ಮತ್ತು ಭೂಮಿಯ ಬಳಕೆ;

(4) ಭೂ ನಿರ್ಧರಣೆ, ಭೂ ದಾಖಲೆಗಳು ಮತ್ತು ಕ್ಷೇತ್ರ ಪರಿಶೀಲನೆ ಆಧಾರದ ಮೇಲಿನ ಸಾಮಾಜಿಕ ಪರಿಣಾಮ ನಿರ್ಧರಣೆಯು, ಸಂತ್ರಸ್ತ ಕುಟುಂಬಗಳ ಸಂಖ್ಯೆ ಮತ್ತು ಅವರುಗಳ ಪೈಕಿಯಿಂದ ಸ್ಥಳಾಂತರಗೊಂಡ ಕುಟಂಬಗಳ ಸಂಖ್ಯೆಯ ಕರಾರುವಕ್ಕಾದ ಅಂದಾಜನ್ನು ಮತ್ತು ಎಣಿಸಲಾದ ಎಲ್ಲಾ ಸಂತ್ರಸ್ತ ಕುಟುಂಬಗಳನ್ನು ಒಳಗೊಳ್ಳತಕ್ಕದ್ದು:

ಪರಂತು, ಗಣನೆಯು ಸಾಧ್ಯವಾಗದಿದ್ದರೆ, ಕನಿಷ್ಠಪಕ್ಷ ಪ್ರಾತಿನಿಧ್ಯ ಮಾದರಿಯಲ್ಲಿ ಅದನ್ನು ಸಾಮಾಜಿಕ ಪರಿಣಾಮ ನಿರ್ಧರಣೆಯ ಘಟಕವು ಮಾಡತಕ್ಕದ್ದು.

(5) ನಮೂನೆ–II ರ ಅನುಸಾರ ಲಭ್ಯವಾಗಬಹುದಾದ ಡಾಟಾ ಮತ್ತು ಅಂಕಿಅಂಶಗಳು, ಕ್ಷೇತ್ರ ಸಂದರ್ಶನಗಳು ಮತ್ತು ಸಮಾಲೋಚನೆಗಳ ಆಧಾರದ ಮೇಲೆ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಸಾಮಾಜಿಕ–ಆರ್ಥಿಕ ಮತ್ತು ಸಾಂಸ್ಕೃತಿಕ ವೈಶಿಷ್ಟ್ಯವನ್ನು ಕಡ್ಡಾಯವಾಗಿ ಸಿದ್ಧಪಡಿಸತಕ್ಕದ್ದು:

ಪರಂತು, ಯೋಜನೆಗಳಲ್ಲಿ ಪುನರ್ ವಸತಿಯನ್ನು ಅಗತ್ಯಪಡಿಸಲಾಗಿರುವಲ್ಲಿ, ಗುರುತಿಸಲಾದ ಪುನರ್ ವಸತಿ ಪ್ರದೇಶಗಳಿಗೆ ಭೇಟಿ ನೀಡತಕ್ಕದ್ದು ಮತ್ತು ಭೂಮಿಯ ಸಂಕ್ಷಿಪ್ತ ಸಾಮಾಜಿಕ ಆರ್ಥಿಕ ವೈಶಿಷ್ಟವನ್ನು ಮತ್ತು ಅದರ ಪ್ರಸ್ತುತ ವಾಸವಿರುವ ಜನಸಂಖ್ಯೆಯನ್ನು ಸೂಚಿಸತಕ್ಕದ್ದು.

(6) ಸಂತ್ರಸ್ತ ಸಮುದಾಯಗಳು ಮತ್ತು ಮುಖ್ಯ ಮಧ್ಯಸ್ಥದಾರರೊಂದಿಗೆ ಸಮಾಲೋಚಿಸಿದ ಮತ್ತು ಮೇಲಿನ ಕಾರ್ಯವಿಧಾನದಲ್ಲಿ ಪಟ್ಟಿ ಮಾಡಲಾದ ಸಂಗ್ರಹಿತ ಡಾಟಾದ ಆಧಾರದ ಮೇಲೆ, ಸಾಮಾಜಿಕ ಪರಿಣಾಮ ನಿರ್ಧರಣೆ, ನಮೂನೆ–II ರ ಮೇರೆಗೆ ಪ್ರಸ್ತಾವಿತ ಯೋಜನೆ ಮತ್ತು ಭೂಸ್ವಾಧೀನ ಯೋಜನೆಯೊಂದಿಗೆ ಸಂಬಂಧಿತ ಸಾಮಾಜಿಕ ಪರಿಣಾಮಗಳ ಸಕಾರಾತ್ಮಕ ಮತ್ತು ನಕರಾತ್ಮಕ ಸ್ವರೂಪ, ವ್ಯಾಪ್ತಿ ಮತ್ತು ತೀವ್ರತೆಯನ್ನು ಗುರುತಿಸತಕ್ಕದ್ದು ಮತ್ತು ಮೌಲ್ಯಮಾಪನ ಮಾಡತಕ್ಕದ್ದು.

(7) ಸಾಮಾಜಿಕ ಪರಿಣಾಮ ನಿರ್ಧರಣೆ ಕಾರ್ಯವಿಧಾನವು, ಸಾಮಾಜಿಕ ಪರಿಣಾಮ ನಿರ್ಧರಣೆ ಯೋಜನೆಯ (ಎಸ್‌ಐಎಂಪಿ) ಸಿದ್ಧತೆಯನ್ನು ನಿರ್ಧರಣೆಯ ಕ್ರಮದಲ್ಲಿ ಗುರುತಿಸಲಾದ ಸಾಮಾಜಿಕ ಪರಿಣಾಮಗಳನ್ನು ನಿವಾರಿಸಲು ಕೈಗೊಳ್ಳಬೇಕಾದ ಸುಧಾರಣ ಕ್ರಮಗಳನ್ನು ಮಂಡಿಸುವುದನ್ನು ಸಹ ಒಳಗೊಳಕ್ಕದ್ದು. ಸಾಮಾಜಿಕ ಪರಿಣಾಮ ನಿರ್ಧರಣಾ ತಂಡವು, ವೆಚ್ಚಗಳ, ಸಕಾಲಿಕತೆ ಮತ್ತು ಸಾಮರ್ಥ್ಯಗಳನ್ನು ಸ್ಪಷ್ಟವಾಗಿ ಸೂಚಿಸುವುದರೊಂದಿಗೆ ಪರಿಣಾಮವನ್ನು ಕಡಿಮೆ ಮಾಡುವ ಮತ್ತು ನಿರ್ವಹಣಾ ತಂತ್ರಗಳ ಕಾರ್ಯಸಾಧ್ಯತೆಯನ್ನು ನಿರ್ಧರಣೆ ಮಾಡಬೇಕು. ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನೆಯು ಈ ಮುಂದಿನ ಕ್ರಮಗಳನ್ನು ಒಳಗೊಳ್ಳತಕ್ಕದ್ದು ಎಂದರೆ;

(ಎ) ಅಧಿನಿಯಮದ ರೂಪುರೇಷೆಗಳಂತೆ ಎಲ್ಲ ಪ್ರವರ್ಗಗಳ ಸಂತ್ರಸ್ತ ಕುಟುಂಬಗಳಿಗೆ ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆ ಮತ್ತು ಪರಿಹಾರದ ನಿಬಂಧನೆಗಳಲ್ಲಿ ನಿರ್ದಿಷ್ಟಪಡಿಸಿದ ಕ್ರಮಗಳು;

(ಬಿ) ಪ್ರಾಜೆಕ್ಟ್ ಪ್ರಸ್ತಾವನೆ ಮತ್ತು ಇತರ ಸಂಬಂಧಪಟ್ಟ ಪ್ರಾಜೆಕ್ಟ್ ದಸ್ತಾವೇಜುಗಳಲ್ಲಿ ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿ ಕೈಗೊಳ್ಳಬೇಕಾದ ಕ್ರಮಗಳು; ಮತ್ತು

(ಸಿ) ಸಾಮಾಜಿಕ ಪರಿಣಾಮ ನಿರ್ಧರಣೆ ಪ್ರಕ್ರಿಯೆ ಮತ್ತು ಸಾರ್ವಜನಿಕ ಅಹವಾಲುಗಳ ಮೂಲಕ ಕಂಡುಕೊಂಡ ಅಂಶಗಳ ಬಗ್ಗೆ ಭೂಮಿ ಅಗತ್ಯವಿರುವ ಸಂಸ್ಥೆ/ವ್ಯಕ್ತಿ ಕೈಗೊಂಡಿರುವ ಕ್ರಮಗಳು.

(8) ಸಾಮಾಜಿಕ ಪರಿಣಾಮ ನಿರ್ಧರಣೆಯು, ನಿವಾರಣ ಕ್ರಮಗಳನ್ನು ಒಳಗೊಂಡಂತೆ ಪ್ರಸ್ತಾವಿತ ಪ್ರಾಜೆಕ್ಟ್‌ನಿಂದ ಮತ್ತು ಭೂಸ್ವಾಧೀನದಿಂದ ಉಂಟಾಗಬಹುದು, ಪ್ರತಿಕೂಲ ಸಾಮಾಜಿಕ ಪರಿಣಾಮಗಳು ಮತ್ತು ಸಾಮಾಜಿಕ ವೆಚ್ಚಗಳು ಮತ್ತು ಪ್ರಸ್ತಾವಿತ ಪ್ರಾಜೆಕ್ಟ್ ಮತ್ತು ಭೂಸ್ವಾಧೀನದ ಸೌಲಭ್ಯಗಳು ಹಂಚಿಕೆ ಸಮತೋಲನದ ಮತ್ತು ಅಂತಿಮ ನಿರ್ಧರಣೆಯನ್ನು ಒದಗಿಸತಕ್ಕದ್ದು ಮತ್ತು ಪ್ರಸ್ತಾವಿತ ಯೋಜನೆಯಿಂದ ಲಾಭವಾಗುವುದಕ್ಕೆ ಬದಲಾಗಿ ಸಂತ್ರಸ್ತ ಕುಟುಂಬಗಳಿಂದ ಎದುರಿಸಬೇಕಾದ ಹೆಚ್ಚಿನ ಸಾಮಾಜಿಕ ವೆಚ್ಚಗಳು ಮತ್ತು ಪ್ರತಿಕೂಲ ಸಾಮಾಜಿಕ ಪರಿಣಾಮಗಳನ್ನು ಪಟ್ಟಿ ಮಾಡುವುದು ಅಥವಾ ಪ್ರಸ್ತಾವಿತ ನಿವಾರಣಾ ಕ್ರಮಗಳ ತರುವಾಯವೂ ಸಂತ್ರಸ್ತ ಕುಟುಂಬಗಳು, ಸದರಿ ಭೂಸ್ವಾಧೀನ ಮತ್ತು ಪುನರ್ ವ್ಯವಸ್ಥೆ ಪರಿಣಾಮದಿಂದಾಗಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಸಂಕಷ್ಟಪರಿಸ್ಥಿತಿಗೆ ಸಿಕ್ಕಿಹಾಕಿಕೊಳ್ಳುವ ಬಗ್ಗೆ ನಿರ್ಧರಣೆಯನ್ನು ನೀಡತಕ್ಕದ್ದು.

**8. ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನದ ವರದಿಯನ್ನು ಪ್ರಕಟಿಸುವ ರೀತಿ.–** (1) ಸಾಮಾಜಿಕ ಪರಿಣಾಮ ನಿರ್ಧರಣೆ ಅಧ್ಯಯನ ವರದಿ ಮತ್ತು ಸಾಮಾಜಿಕ ಪರಿಣಾಮ ವ್ಯವಸ್ಥಾಪನೆ ಯೋಜನೆ, ಪೂರ್ಣಗೊಂಡ ತರುವಾಯ ಆದಷ್ಟು ಬೇಗನೆ, ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಸಾಮಾಜಿಕ

ಪರಿಣಾಮ ನಿರ್ಧರಣೆಗಳ ಮುಖ್ಯ ನಿರ್ಣಯಗಳನ್ನು ಪ್ರಕಟಿಸುವುದಕ್ಕಾಗಿ ಅವುಗಳ ಬಗೆಗೆ ಪ್ರತಿಕ್ರಿಯೆಗಳನ್ನು ಕೋರಿ ಮತ್ತು ಹೆಚ್ಚಿನ ಮಾಹಿತಿಯನ್ನು ಕೋರಿ ಮತ್ತು ಅಂತಿಮ ದಸ್ತಾವೇಜುಗಳಲ್ಲಿ ಅದನ್ನು ಸೇರಿಸುವ ದೃಷ್ಟಿಯಿಂದ ಸಾರ್ವಜನಿಕ ಅಹವಾಲಗಳನ್ನು ನಡೆಸತಕ್ಕದ್ದು.

(2) ಭೂಸ್ವಾಧೀನದಿಂದ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಶೇಕಡಾ ಇಪ್ಪತ್ತೈದರಷ್ಟುಕ್ಕೂ ಹೆಚ್ಚಿನ ಸದಸ್ಯರು ಸಂತ್ರಸ್ತರಾಗಿದ್ದಾರೋ ಆ ಎಲ್ಲ ಗ್ರಾಮ ಸಭೆಗಳಲ್ಲಿ ಸಾರ್ವಜನಿಕ ಅಹವಾಲುಗಳನ್ನು ನಡೆಸತಕ್ಕದ್ದು.

(3) ಸಾರ್ವಜನಿಕ ಅಹವಾಲಿನ ದಿನಾಂಕ ಮತ್ತು ಸ್ಥಳವನ್ನು, ಘೋಷಿಸತಕ್ಕದ್ದು ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ಪ್ರಸ್ತಾವಿಸಿದ ಐದು ಕಿಲೋಮೀಟರುಗಳ ವ್ಯಾಪ್ತಿಯೊಳಗೆ ಎಲ್ಲ ಹಳ್ಳಿಗಳಲ್ಲಿ ಸಾರ್ವಜನಿಕ ಅಧಿಸೂಚನೆಗಳು ಮತ್ತು ಭಿತ್ತಿಪತ್ರಗಳ ಮೂಲಕ ಮತ್ತು ಗ್ರಾಮ ಪಂಚಾಯಿತಿ ಅಥವಾ ಪೌರಸಭೆ ವಾರ್ಡ್ ಪ್ರತಿನಿಧಿಗಳಿಗೆ ನೇರವಾಗಿ ತಿಳಿಸುವ ಮೂಲಕ ಮತ್ತು ರಾಜ್ಯಸರ್ಕಾರದ ವೆಬ್‌ಸೈಟ್‌ನಲ್ಲಿ ಮಾಹಿತಿಯನ್ನು ಅಪ್‌ಲೋಡ್ ಮಾಡುವ ಮೂಲಕ ಮೂರು ತಿಂಗಳು ಮುಂಚಿತವಾಗಿ ತಿಳಿಸತಕ್ಕದ್ದು ಮತ್ತು ವ್ಯಾಪಕ ಪ್ರಚಾರ ನೀಡತಕ್ಕದ್ದು.

(4) ಸಾಮಾಜಿಕ ಪರಿಣಾಮ ನಿರ್ಧರಣಾ ಕರಡು ವರದಿ ಮತ್ತು ಸಾಮಾಜಿಕ ಪರಿಣಾಮ ವ್ಯವಸ್ಥಾಪನೆ ಯೋಜನೆಯನ್ನು, ಸಾರ್ವಜನಿಕ ಅಹವಾಲನ್ನು ಕೇಳುವುದಕ್ಕೆ ಮೂರು ವಾರಗಳ ಮುಂಚಿತವಾಗಿ ಸ್ಥಳೀಯ ಭಾಷೆಯಲ್ಲಿ ಪ್ರಕಟಿಸತಕ್ಕದ್ದು ಮತ್ತು ಅದನ್ನು ಅನ್ವಯವಾಗಬಹುದಾದ ಸ್ವಾಧೀನಕ್ಕೆ ಒಳಪಡಬಹುದಾದ ಗ್ರಾಮ ಪಂಚಾಯಿತಿ ಹಾಗೂ ಪೌರಸಭೆ ಕಛೇರಿಗಳಲ್ಲಿ ಹಂಚಿಕೆ ಮಾಡತಕ್ಕದ್ದು. ಕರಡು ವರದಿಯ ಒಂದು ಪ್ರತಿಯನ್ನು ರಾಜ್ಯ ಕಮೀಷನರ್ (ಪುನರ್ವಸತಿ ಮತ್ತು ಪುನರ್ವ್ಯವಸ್ಥೆ) ಕಚೇರಿಯಲ್ಲಿ, ಜಿಲ್ಲಾಧಿಕಾರಿಗಳ ಕಚೇರಿ ಮತ್ತು ಆಡಳಿತಾಧಿಕಾರಿಗಳ ಕಚೇರಿಯಲ್ಲಿ ಲಭ್ಯವಾಗುವಂತೆ ಮಾಡತಕ್ಕದ್ದು. ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿಗೂ ಸಹ ಕರಡು ವರದಿಯ ಪ್ರತಿಯನ್ನು ನೀಡತಕ್ಕದ್ದು. ವರದಿಯ ಸಾಕಷ್ಟು ಪ್ರತಿಗಳನ್ನು ಮತ್ತು ಸಾರಾಂಶಗಳನ್ನು ಸಾರ್ವಜನಿಕರ ಅಹವಾಲು ದಿನದಂದು ಲಭ್ಯವಾಗುವಂತೆ ಮಾಡತಕ್ಕದ್ದು. ಸಾಮಾಜಿಕ ಪರಿಣಾಮ ನಿರ್ಧರಣೆ ವರದಿಯ ಪ್ರಮುಖ ಅಂಶಗಳನ್ನು ತಿಳಿಸುವುದಕ್ಕೆ ಅವಶ್ಯ ಪ್ರದರ್ಶಕ ಸಾಮಗ್ರಿಗಳನ್ನು ಮತ್ತು ಇತರ ದೃಶ್ಯಾವಳಿಗಳನ್ನು ಬಳಕೆ ಮಾಡಿಕೊಳ್ಳತಕ್ಕದ್ದು.

(5) ಸಾಮಾಜಿಕ ಪರಿಣಾಮ ನಿರ್ಧರಣೆ ತಂಡದ ಸದಸ್ಯನಿಗೆ, ಯುಕ್ತ ಮಟ್ಟದಲ್ಲಿ ಗೊತ್ತುಪಡಿಸಿದ ಸರ್ಕಾರದ ಅಧಿಕಾರಿಗಳೊಂದಿಗೆ ಸ್ಥಳೀಯ ಆಡಳಿತದ ಮೂಲಕ ಸಂಘಟಿಸಲಾದ ಸಾರ್ವಜನಿಕ ಅಹವಾಲನ್ನು ಕೇಳಲು ಸೌಲಭ್ಯ ಕಲ್ಪಿಸತಕ್ಕದ್ದು. ಅದರ ಸಂಬಂಧಪಟ್ಟ ಪ್ರದೇಶಗಳಲ್ಲಿ ಸಾರ್ವಜನಿಕ ಅಹವಾಲಿಗಾಗಿ ಏರ್ಪಾಡು ಮಾಡಲು ಸಂಬಂಧಿಸಿದಂತೆ ಎಲ್ಲ ತೀರ್ಮಾನಗಳಲ್ಲಿ ಗ್ರಾಮ ಪಂಚಾಯಿತಿ ಅಥವಾ ಪೌರಸಭೆ ಪ್ರತಿನಿಧಿಗಳು ಸಹ ಒಳಗೊಳ್ಳತಕ್ಕದ್ದು.

(6) ಎಲ್ಲ ವ್ಯವಹರಣೆಗಳಲ್ಲಿ ಭಾಗವಹಿಸುವವರೆಲ್ಲರು ಅರ್ಥಮಾಡಿಕೊಂಡಿರುವುದನ್ನು ಮತ್ತು ಅವರ ಅಭಿಪ್ರಾಯೋಕ್ತಿಗಳನ್ನು ಖಚಿತಪಡಿಸಿಕೊಳ್ಳುವುದಕ್ಕೆ ಪರಿಣಾಮಕಾರಿಯಾದ ಮತ್ತು ವಿಶ್ವಾಸಾರ್ಹ ಭಾಷಾಂತರಕಾರರೊಂದಿಗೆ ಸ್ಥಳೀಯ ಭಾಷೆಯಲ್ಲಿಯೇ ಆ ಎಲ್ಲ ವ್ಯವಹರಣೆಗಳು ನಡೆಯತಕ್ಕದ್ದು.

(7) ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿ ಮತ್ತು ಗೊತ್ತುಪಡಿಸಿದ ಭೂಸ್ವಾಧೀನತೆ ಮತ್ತು ಪುನರ್‌ವಸತಿ ಮತ್ತು ಪುನರ್ ವ್ಯವಸ್ಥೆ ಪ್ರಕಾರ್ಯಗಳ ಪ್ರತಿನಿಧಿಗಳು ಸಹ ಸಾರ್ವಜನಿಕ ಅಹವಾಲಿನಲ್ಲಿ ಹಾಜರಿರತಕ್ಕದ್ದು ಮತ್ತು ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಪಕ್ಷಕಾರರಿಂದ ಉದ್ಭವವಾಗುವ ಪ್ರಶ್ನೆಗಳನ್ನು ಮತ್ತು ಸಂಬಂಧಪಟ್ಟ ವಿಷಯಗಳನ್ನು ಕೇಳಿಸಿಕೊಳ್ಳತಕ್ಕದ್ದು.

(8) ಸಾರ್ವಜನಿಕ ಪ್ರತಿನಿಧಿಗಳು, ಸ್ಥಳೀಯ ಸ್ವಯಂ ಸೇವಾ ಸಂಘಟನೆಗಳು ಮತ್ತು ಮಾಧ್ಯಮದವರನ್ನು ಸಾರ್ವಜನಿಕ ಅಹವಾಲುಗಳಲ್ಲಿ ಹಾಜರಾಗಲು ಆಹ್ವಾನಿಸತಕ್ಕದ್ದು.

(9) ಸಾರ್ವಜನಿಕ ಅಹವಾಲಿನ ವ್ಯವಹರಣೆಗಳನ್ನು ವಿಡಿಯೋದಲ್ಲಿ ದಾಖಲಿಸತಕ್ಕದ್ದು ಮತ್ತು ಅದರ ನಕಲನ್ನು ಮಾಡತಕ್ಕದ್ದು. ಈ ರೀತಿ ದಾಖಲೆ ಮಾಡಿರುವುದನ್ನು ಮತ್ತು ನಕಲು ಮಾಡಿರುವುದನ್ನು, ಅಂತಿಮ ಸಾಮಾಜಿಕ ಪರಿಣಾಮ ನಿರ್ಧರಣೆ ವರದಿ ಮತ್ತು ಸಾಮಾಜಿಕ ಪರಿಣಾಮ ವ್ಯವಸ್ಥಾಪನಾ ಯೋಜನೆ ಜೊತೆಯಲ್ಲಿ ಸಲ್ಲಿಸತಕ್ಕದ್ದು.

(10) ಸಾರ್ವಜನಿಕ ಅಹವಾಲುಗಳು ಮುಕ್ತಾಯವಾದ ನಂತರ ಸಾಮಾಜಿಕ ಪರಿಣಾಮ ನಿರ್ಧರಣೆ ತಂಡವು, ತದನುಸಾರ ಪರಿಷ್ಕೃತ ಸಾಮಾಜಿಕ ಪರಿಣಾಮ ನಿರ್ಧರಣೆ ವರದಿಯಲ್ಲಿ ಅವರ ವಿಶ್ಲೇಷಣೆಗಳ ಜೊತೆಗೆ ಅದನ್ನು ಸೇರಿಸತಕ್ಕದ್ದು.

(11) ಸಾರ್ವಜನಿಕ ಸಭೆಯಲ್ಲಿ ಉದ್ಭವವಾದ ಪ್ರತಿಯೊಂದು ಆಕ್ಷೇಪಣೆಯನ್ನು ದಾಖಲಿಸತಕ್ಕದ್ದು ಮತ್ತು ಸಾಮಾಜಿಕ ಪರಿಣಾಮ ನಿರ್ಧರಣೆ ತಂಡವು ಪ್ರತಿಯೊಂದು ಆಕ್ಷೇಪಣೆಯನ್ನು ಖಚಿತಪಡಿಸತಕ್ಕದ್ದು ಆ ಸಾಮಾಜಿಕ ಪರಿಣಾಮ ನಿರ್ಧರಣೆ ವರದಿಯಲ್ಲಿ ಅವುಗಳನ್ನು ಪರಿಗಣಿಸತಕ್ಕದ್ದು.

**9. ಸಾಮಾಜಿಕ ಪರಿಣಾಮ ನಿರ್ಧರಣೆ (ಎಸ್‌ಐಎ) ವರದಿ ಮತ್ತು ಸಾಮಾಜಿಕ ಪರಿಣಾಮ ವ್ಯವಸ್ಥಾಪನೆ ಯೋಜನೆ (ಎಸ್‌ಐಎಂಪಿ) ವರದಿಯನ್ನು ಸಲ್ಲಿಸುವುದು.–** ಅಂತಿಮ ಸಾಮಾಜಿಕ ಪರಿಣಾಮ ನಿರ್ಧರಣೆ ವರದಿ ಮತ್ತು ಸಾಮಾಜಿಕ ಪರಿಣಾಮ ವ್ಯವಸ್ಥಾಪನೆ ಯೋಜನೆಯನ್ನು ಸ್ಥಳೀಯ ಭಾಷೆಯಲ್ಲಿ ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ಪಂಚಾಯಿತಿ, ಪೌರಸಭೆ ಅಥವಾ ಪೌರನಿಗಮ ಸಂದರ್ಭಾನುಸಾರ ಮತ್ತು ರಾಜ್ಯ ಕಮೀಷನರ್ (ಪುನರ್‌ವಸತಿ ಮತ್ತು ಪುನರ್‌ವ್ಯವಸ್ಥೆ) ಜಿಲ್ಲಾಧಿಕಾರಿ, ಉಪವಿಭಾಗೀಯ ಅಧಿಕಾರಿ, ಆಡಳಿತಾಧಿಕಾರಿ ಮತ್ತು ತಹಶೀಲ್ದಾರ್ ಕಚೇರಿಗಳಲ್ಲಿ ಲಭ್ಯವಾಗುವಂತೆ ಮಾಡತಕ್ಕದ್ದು ಮತ್ತು ಎದ್ದು ಕಾಣುವ ಸ್ಥಳಗಳಲ್ಲಿ ಭಿತ್ತಿಪತ್ರಗಳನ್ನು ಅಂಟಿಸುವ ಮೂಲಕ ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಪ್ರಚಾರ ಮಾಡುವ ಭಿತ್ತಿಪತ್ರಗಳ ನಮೂನೆಯಲ್ಲಿ ಪ್ರಸಾರ ಮಾಡತಕ್ಕದ್ದು ಮತ್ತು ರಾಜ್ಯ ಸರ್ಕಾರದ ವೆಬ್‌ಸೈಟ್‌ನಲ್ಲೂ ಸಹ ಅದನ್ನು ಅಪ್‌ಲೋಡ್ ಮಾಡತಕ್ಕದ್ದು.

**10. ಸಾಮಾಜಿಕ ಪರಿಣಾಮ ನಿರ್ಧರಣೆ ವರದಿ (ಎಸ್‌ಐಎ) ಮತ್ತು ಸಾಮಾಜಿಕ ಪರಿಣಾಮ ವ್ಯವಸ್ಥಾಪನೆ ಯೋಜನೆ.–** ಸಾಮಾಜಿಕ ಪರಿಣಾಮ ನಿರ್ಧರಣಾ ವರದಿ ಮತ್ತು ಸಾಮಾಜಿಕ ವ್ಯವಸ್ಥಾಪನೆ ಯೋಜನೆಯ ಸಂಬಂಧಪಟ್ಟ ಮಾಹಿತಿ ಮತ್ತು ವಿಶ್ಲೇಷಣೆಯು ಒಂದೇ ದಸ್ತವೇಜಿನಲ್ಲಿರುವಂತೆ ಮತ್ತು ವಿಶೇಷವಾಗಿ ಸಂತ್ರಸ್ಥ ಸಮುದಾಯದ ಸದಸ್ಯರಿಗೆ ಲಿಖಿತ ರೂಪದಲ್ಲಿ, ಸ್ಪಷ್ಟವಾಗಿ, ಸಂಕ್ಷಿಪ್ತವಾಗಿ, ಲಭ್ಯವಾಗುವುದನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ರೂಪಿಸತಕ್ಕದ್ದು.

**11. ತಜ್ಞರ ತಂಡದಿಂದ ಸಾಮಾಜಿಕ ಪರಿಣಾಮ ನಿರ್ಧರಣೆ ವರದಿ ಮೌಲ್ಯನಿರ್ಣಯ.–** (1) ಈ ಅಧಿನಿಯಮದ 7ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ರಚಿಸಿದ ತಜ್ಞರ ತಂಡವು, ಸಾಮಾಜಿಕ ಪರಿಣಾಮ ನಿರ್ಧರಣೆ ವರದಿಯನ್ನು ಮೌಲ್ಯನಿರ್ಧರಣೆ ಮಾಡತಕ್ಕದ್ದು ಮತ್ತು ತಜ್ಞರ ತಂಡವು ಅದನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳ ಒಳಗೆ ಜಾರಿಗೆ ಬರುವಂತೆ ಅದನ್ನು ಶಿಫಾರಸ್ಸು ಮಾಡತಕ್ಕದ್ದು.

(2) ತಜ್ಞರ ತಂಡದ ಶಿಫಾರಸ್ಸುಗಳನ್ನು, ಸ್ವಾಧೀನಕ್ಕೆ ಒಳಪಡುವ ಪ್ರದೇಶಕ್ಕೆ ಸಂಬಂಧಪಟ್ಟ ಪಂಚಾಯಿತಿ ಅಥವಾ ಪುರಸಭೆ ಅಥವಾ ಪೌರನಿಗಮಕ್ಕೆ, ಗ್ರಾಮ ಮಟ್ಟದಲ್ಲಿ ಅಥವಾ ವಾರ್ಡ್ ಮಟ್ಟದಲ್ಲಿ ಮತ್ತು ರಾಜ್ಯ ಕಮೀಷನರ್ (ಪುನರ್‌ವಸತಿ ಮತ್ತು ಪುನರ್‌ವ್ಯವಸ್ಥೆ) ಜಿಲ್ಲಾಧಿಕಾರಿಗಳು, ಉಪವಿಭಾಗಾಧಿಕಾರಿ, ಆಡಳಿತಾಧಿಕಾರಿ ಮತ್ತು ತಹಶೀಲ್ದಾರ್‌ರ ಕಛೇರಿಗಳಲ್ಲಿ ಸ್ಥಳೀಯ ಭಾಷೆಯಲ್ಲಿ ಲಭ್ಯವಾಗುವಂತೆ ಮಾಡತಕ್ಕದ್ದು ಮತ್ತು ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಪ್ರಚಾರ ಮಾಡಲು ಭಿತ್ತಿಪತ್ರಗಳ ನಮೂನೆಯಲ್ಲಿ ಮತ್ತು ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಎದ್ದು ಕಾಣುವ ಸ್ಥಳಗಳಲ್ಲಿ ಅಂಟಿಸುವ ಮೂಲಕ ಅವುಗಳನ್ನು ಪ್ರಕಟಿಸತಕ್ಕದ್ದು ಮತ್ತು ರಾಜ್ಯ ಸರ್ಕಾರದ ವೆಬ್ ಸೈಟ್‌ನಲ್ಲಿ ಅದನ್ನು ಅಪ್‌ಲೋಡ್ ಮಾಡತಕ್ಕದ್ದು.

**12. ಸಾಮಾಜಿಕ ಪರಿಣಾಮ ನಿರ್ಧರಣಾ ವರದಿ, ತಜ್ಞರ ತಂಡದ ಶಿಫಾರಸ್ಸುಗಳನ್ನು, ಇತ್ಯಾದಿಗಳನ್ನು ಪರಿಗಣಿಸುವುದು.–** (1) ಸಾಮಾಜಿಕ ಪರಿಣಾಮ ನಿರ್ಧರಣಾ ವರದಿಯನ್ನು, ತಜ್ಞರ ತಂಡದ ಶಿಫಾರಸ್ಸುಗಳನ್ನು, ಜಿಲ್ಲಾಧಿಕಾರಿಗಳ ವರದಿಯನ್ನು, ಯಾವುದಾದರೂ ವರದಿ ಇದ್ದರೆ ಆ ವರದಿಯನ್ನು ಮತ್ತು ಸ್ವಾಧೀನತೆಗಾಗಿ ಶಿಫಾರಸ್ಸು ಮಾಡಲಾದ ಅಂಥ ಪ್ರದೇಶಗಳಲ್ಲಿ ಜನರ ಕನಿಷ್ಠ ಸ್ಥಳಾಂತರ, ಮೂಲಭೂತ ಸೌಕರ್ಯ, ಜೀವ ಪರಿಸರಕ್ಕೆ ಕನಿಷ್ಠ ಅಡಚಣೆ ಮತ್ತು ಸ್ವಾಧೀನಕ್ಕೆ ಒಳಪಡುವ ವ್ಯಕ್ತಿಗಳ ಮೇಲೆ ಕನಿಷ್ಠ ಪ್ರತಿಕೂಲ ಪರಿಣಾಮವನ್ನು ಖಚಿತಪಡಿಸಿಕೊಳ್ಳುವ ಸಲುವಾಗಿ ಅವುಗಳನ್ನು ಪರಿಶೀಲಿಸತಕ್ಕದ್ದು.

(2) ರಾಜ್ಯ ಸರ್ಕಾರದ ತೀರ್ಮಾನದ ಮೇರೆಗೆ, ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಸಂಬಂಧಪಟ್ಟ ಪಂಚಾಯಿತಿ, ಪುರಸಭೆ ಅಥವಾ ಪೌರನಿಗಮಕ್ಕೆ, ಗ್ರಾಮಮಟ್ಟದಲ್ಲಿ ಅಥವಾ ವಾರ್ಡ್ ಮಟ್ಟದಲ್ಲಿ ಮತ್ತು ರಾಜ್ಯ ಕಮೀಷನರ್ (ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆ), ಜಿಲ್ಲಾಧಿಕಾರಿಗಳ, ಉಪವಿಭಾಗಾಧಿಕಾರಿಗಳ, ಆಡಳಿತಾಧಿಕಾರಿ ಮತ್ತು ತಹಶೀಲ್ದಾರರ ಕಛೇರಿಗಳಲ್ಲಿ ಸ್ಥಳೀಯ ಭಾಷೆಯಲ್ಲಿ ಲಭ್ಯವಾಗುವಂತೆ ಮಾಡತಕ್ಕದ್ದು ಮತ್ತು ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಪ್ರಚಾರ ಮಾಡಲು ಭಿತ್ತಿಪತ್ರಗಳ ರೂಪದಲ್ಲಿ ಮತ್ತು ಎದ್ದುಕಾಣುವ ಸ್ಥಳಗಳಲ್ಲಿ ಭಿತ್ತಿಪತ್ರಗಳನ್ನು ಅಂಟಿಸುವ ಮೂಲಕ ಪ್ರಚಾರ ನೀಡತಕ್ಕದ್ದು ಮತ್ತು ರಾಜ್ಯ ಸರ್ಕಾರದ ವೆಬ್‌ಸೈಟ್‌ನಲ್ಲಿ ಅದನ್ನು ಅಪ್‌ಲೋಡ್ ಮಾಡತಕ್ಕದ್ದು.

**13. ಭೂ ಸ್ವಾಧೀನತೆ ಮತ್ತು ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆಗೆ ವೆಬ್ ಆಧಾರಿತ ಕೆಲಸ ನಿರ್ವಹಣೆ ಮತ್ತು ವ್ಯವಸ್ಥಾಪನಾ ಮಾಹಿತಿ ವ್ಯವಸ್ಥೆ (ಎಂಐಎಸ್).–** ರಾಜ್ಯ ಸರ್ಕಾರವು ವೆಬ್‌ಸೈಟನ್ನು ಸಮರ್ಪಕ ರೀತಿಯಲ್ಲಿ ಮತ್ತು ಬಳಕೆದಾರ ಸ್ನೇಹಿಯಾಗಿ ರೂಪಿಸತಕ್ಕದ್ದು, ಪ್ರತಿಯೊಂದು ಭೂಸ್ವಾಧೀನ ಪ್ರಕರಣದಲ್ಲಿ ಪೂರ್ಣ ಪ್ರಮಾಣದ ಕೆಲಸವನ್ನು ನಿರ್ವಹಿಸುವುದಕ್ಕೆ ಅದನ್ನು ಒಂದು ಸಾರ್ವಜನಿಕ ವೇದಿಕೆಯಾಗಿ ಬಳಕೆ ಮಾಡುವಂತೆ ರೂಪಿಸಲಾಗುವುದು, ಸಾಮಾಜಿಕ ಪರಿಣಾಮ ನಿರ್ಧರಣೆಯನ್ನು ಮತ್ತು ನಿರ್ಣಯಗಳನ್ನು ತೆಗೆದುಕೊಳ್ಳಲು, ಅನುಷ್ಠಾನಗೊಳಿಸಲು ಮತ್ತು ಲೆಕ್ಕಪರಿಶೋಧನೆ ಮಾಡುಲು ಕೈಗೊಳ್ಳುವ ಪ್ರತಿಯೊಂದು ಕ್ರಮವನ್ನು ಅಧಿಸೂಚನೆಯೊಂದಿಗೆ ಪ್ರಾರಂಭಿಸುವುದು.

**14. ಸಾಮಾಜಿಕ ಪರಿಣಾಮ ನಿರ್ಧರಣಾ ಪ್ರಕ್ರಿಯೆಗೆ ಸಂಬಂಧಿಸಿದ ಹೆಚ್ಚುವರಿ ಮಾರ್ಗಸೂಚಿಗಳು.–** ಯೋಜನೆಗಾಗಿ ನಿರ್ದಿಷ್ಟಾಂಶಗಳು ಮತ್ತು ಪರಿವಿಡಿ ಅಂಕಣವು ನಮೂನೆ–II ಮತ್ತು ನಮೂನೆ–III ರಲ್ಲಿ ಇರತಕ್ಕದ್ದು.

**15. ಪಾಳು ಬಿದ್ದ, ಬಂಜರಾಗಿರುವ, ಬಳಕೆಯಾಗದ ಭೂಮಿಯ ತಪಶೀಲುಪಟ್ಟಿ.–** ಭೂಮಿಯ ಸ್ವಾಧೀನತೆಯ ಮೂಲಕ ವ್ಯಕ್ತಿಗಳ ಸ್ಥಳಾಂತರವನ್ನು ಕನಿಷ್ಠ ನಿರುಪೇಕ್ಷತೆಯನ್ನು ಖಚಿತಪಡಿಸುವುದಕ್ಕೆ ಮತ್ತು ಬಳಕೆಯಾಗದ ಸಾರ್ವಜನಿಕ ಭೂಮಿಯ ಬಳಕೆಯ ಸೌಲಭ್ಯಕ್ಕೆ ರಾಜ್ಯ ಸರ್ಕಾರವು ಸಾಮಾಜಿಕ ಪರಿಣಾಮ ನಿರ್ಧರಣಾ ತಂಡ ಮತ್ತು ತಜ್ಞರ ತಂಡಕ್ಕೆ ಜಿಲ್ಲಾ ಮಟ್ಟದಲ್ಲಿ ಪಾಳು ಬಿದ್ದ, ಬಂಜರಾಗಿರುವ ಮತ್ತು ಬಳಕೆಯಾಗದ ಸಾರ್ವಜನಿಕ ಭೂಮಿಯ ಮತ್ತು ಸರ್ಕಾರಿ ಭೂ ಬ್ಯಾಂಕ್‌ನಲ್ಲಿ ಲಭ್ಯವಿರುವ ಭೂಮಿಯ ತಪಶೀಲು ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು. ತಪಶೀಲು ಪಟ್ಟಿಯನ್ನು ಕಾಲಕಾಲಕ್ಕೆ ಇಂದೀಕರಿಸತಕ್ಕದ್ದು.

## ಅಧ್ಯಾಯ – III

### ಪೂರ್ವ ಸಮ್ಮತಿ ಪಡೆಯುವ ಪ್ರಕ್ರಿಯೆ

**16. ಸಾರ್ವಜನಿಕ ಉದ್ದೇಶಕ್ಕಾಗಿ ಸಾರ್ವಜನಿಕ – ಖಾಸಗಿ ಪ್ರಾಜೆಕ್ಟ್‌ಗಾಗಿ ಮತ್ತು ಖಾಸಗಿ ಪ್ರಾಜೆಕ್ಟ್‌ಗಳಿಗಾಗಿ ಭೂಮಿಗಳ ಸ್ವಾಧೀನಕ್ಕಾಗಿ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂ ಮಾಲೀಕರಗಳ ಪೂರ್ವ ಸಮ್ಮತಿಯ ಅಗತ್ಯತೆಗಳು.–** (1) ರಾಜ್ಯ ಸರ್ಕಾರವು, ಸಂಬಂಧಿಸಿದ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮೂಲಕ ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನದ ಜೊತೆಯಲ್ಲಿ ಭಾಗ–ಎ ಯ ನಮೂನೆ IV ರಲ್ಲಿ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರುಗಳ ಪೂರ್ವ ಸಮ್ಮತಿಯನ್ನು ಪಡೆಯುವುದಕ್ಕಾಗಿ ಪ್ರಕ್ರಿಯೆಯನ್ನು ಆರಂಭಿಸತಕ್ಕದ್ದು, ಜಿಲ್ಲಾಧಿಕಾರಿಗಳು ಪೂರ್ವಸಮ್ಮತಿ ಪಡೆಯುವ ಪ್ರಕ್ರಿಯೆಯನ್ನು ಆರಂಭಿಸಲು ತನಗೆ ಸಹಾಯ ಮಾಡುವುದಕ್ಕೆ ಯಾರೇ ಅಧಿಕಾರಿಯನ್ನು ನೇಮಕ ಮಾಡಬಹುದು.

(2) ಜಿಲ್ಲಾಧಿಕಾರಿಗಳು ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಭೂಮಿಯ ಹಕ್ಕುಗಳಿಗೆ ಸಂಬಂಧಿಸಿದ ಬಾಕಿ ಇರುವ ವಿವಾದಗಳನ್ನು ಇತ್ಯರ್ಥ ಪಡಿಸುವುದಕ್ಕೆ, ಭೂಮಿಯ ಸ್ವಾಮ್ಯಕ್ಕೆ ಮತ್ತು ಇತರ ರೆವೆನ್ಯೂ ದಾಖಲೆಗಳಿಗೆ ಅವಶ್ಯಕ ಕ್ರಮಗಳನ್ನು ಕೈಗೊಳ್ಳತಕ್ಕದ್ದು. ಪೂರ್ವ ಸಮ್ಮತಿ ಕಾರ್ಯವಿಧಾನದ ಸಲುವಾಗಿ ಭೂಮಾಲೀಕನ ಹೆಸರು, ಭೂಮಿಯ ಅಧಿಭೋಗದಾರ ಮತ್ತು ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರನ್ನು ಗುರುತಿಸುವುದಕ್ಕಾಗಿ ಪ್ರಕ್ರಿಯೆಯನ್ನು ಆರಂಭಿಸುವುದು. ಜಿಲ್ಲಾಧಿಕಾರಿಗಳು ಈ ಉದ್ದೇಶಕ್ಕಾಗಿ ವಿಶೇಷ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು 45 ದಿನಗಳೊಳಗೆ ಈ ಪ್ರಕ್ರಿಯೆಯು ಪೂರ್ಣಗೊಳಿಸತಕ್ಕದ್ದು.

(3) ಜಿಲ್ಲಾಧಿಕಾರಿಗಳು, ಮೇಲೆ ಹೇಳಿದ ಭೂಮಿಯ ದಾಖಲೆಗಳನ್ನು ಸರಿಪಡಿಸುವ ಮತ್ತು ಇಂದೀಕರಿಸುವ ಪ್ರಕ್ರಿಯೆಯು ಪೂರ್ಣಗೊಂಡ ತರುವಾಯ ಸಾಮಾಜಿಕ ಪರಿಣಾಮ ನಿರ್ಧಾರಣಾ ಏಜೆನ್ಸಿಯ ಮೂಲಕ ಸಿದ್ಧಪಡಿಸಿದ ಪಟ್ಟಿಯನ್ನು ಪರಿಗಣಿಸಿದ ತರುವಾಯ ಅಗತ್ಯವಾಗಿ ಯಾರ ಸಮ್ಮತಿ ಪಡೆಯಬೇಕಾಗಿದೆಯೋ ಅಂಥ ಎಲ್ಲಾ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರ, ಭೂಮಿಯ ಅಧಿಭೋಗದಾರರ ಮತ್ತು ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರ ಪಟ್ಟಿಯನ್ನು ಪಡೆದುಕೊಳ್ಳತಕ್ಕದ್ದು. ಈ ಪಟ್ಟಿಯನ್ನು ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಕರಪತ್ರ, ಭಿತ್ತಿ ಪತ್ರಗಳ ರೂಪದಲ್ಲಿ ಮತ್ತು ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಎದ್ದು ಕಾಣುವ ಸ್ಥಳಗಳಲ್ಲಿ ಪ್ರದರ್ಶಿಸುವ ಮೂಲಕ (3)ನೇ ಉಪ ನಿಯಮದ ಮೇರೆಗೆ ಸ್ವಾಧೀನಕ್ಕೆ ಒಳಪಡುವ

ಪ್ರದೇಶದ ಭೂಮಾಲೀಕರ, ಭೂಮಿಯ ಅಧಿಭೋಗದಾರರೊಂದಿಗೆ ಸಭೆ ನಡೆಸುವ ಕನಿಷ್ಠ ಹದಿನೈದು ದಿನಗಳ ಮುಂಚಿತವಾಗಿ ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಲಭ್ಯವಾಗುವಂತೆ ಮಾಡತಕ್ಕದ್ದು.

(4) ಯಾವುದೇ ಆಕ್ಷೇಪಣೆ ಇದ್ದ ಸಂದರ್ಭದಲ್ಲಿ, ಅಂಥ ಆಕ್ಷೇಪಣೆಗಳನ್ನು ತೆಗೆದುಕೊಳ್ಳತಕ್ಕದ್ದು, ಮತ್ತು ಅಂಥ ಆಕ್ಷೇಪಣೆಯನ್ನು ತಿರಸ್ಕರಿಸಲು ಇರುವ ಕಾರಣಗಳನ್ನು ಅಥವಾ ಅಂಗೀಕರಿಸಲು ಇರುವ ಕಾರಣಗಳನ್ನು ಲಿಖಿತದಲ್ಲಿ ದಾಖಲಿಸತಕ್ಕದ್ದು ಮತ್ತು ಅಂಥ ಆಕ್ಷೇಪಣೆಯ ಸ್ವೀಕಾರವಾದ ಹತ್ತು ದಿನಗಳ ಒಳಗಾಗಿ ಸಂಬಂಧಿಸಿದ ವ್ಯಕ್ತಿಗೆ ಜಿಲ್ಲಾಧಿಕಾರಿಗಳ ಮೂಲಕ ತಿಳಿಸತಕ್ಕದ್ದು.

(5) ಜಿಲ್ಲಾಧಿಕಾರಿಗಳು, ಗ್ರಾಮ ಪಂಚಾಯಿತಿಯೊಂದಿಗೆ ಸಮಾಲೋಚಿಸಿ, ಸಂದರ್ಭಾನುಸಾರ ಗ್ರಾಮ ಅಥವಾ ವಾರ್ಡ್ ಮಟ್ಟದಲ್ಲಿ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರ ಅಥವಾ ಭೂಮಿಯ ಅಧಿಭೋಗದಾರರ ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರ ಸಭೆಯನ್ನು ನಡೆಸಲು ಕೊನೆಪಕ್ಷ ಮೂರು ವಾರಗಳ ಮುಂಚಿತವಾಗಿ ದಿನಾಂಕ, ಸಮಯ ಮತ್ತು ಸ್ಥಳವನ್ನು ಅಧಿಸೂಚಿಸತಕ್ಕದ್ದು.

(6) ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿಗಳಿಂದ ಒಪ್ಪಲಾದ ಪ್ರಸ್ತಾವಿಕ ನಿಬಂಧನೆ ಮತ್ತು ಷರತ್ತುಗಳನ್ನು, ಸಂದರ್ಭಾನುಸಾರ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರ ಅಥವಾ ಭೂಮಿಯ ಅಧಿಭೋಗದಾರರ ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರ ಸಭೆಯನ್ನು ನಡೆಸುವ ಕೊನೆಪಕ್ಷ ಮೂರು ವಾರಗಳ ಮುಂಚಿತವಾಗಿ ಅವರಿಗೆ ಸ್ಥಳೀಯ ಭಾಷೆಯಲ್ಲಿಯೂ ಸಹ ಲಭ್ಯವಾಗುವಂತೆ ಮಾಡತಕ್ಕದ್ದು.

(7) ಸಾರ್ವಜನಿಕ ಖಾಸಗಿ ಪಾಲುದಾರಿಕೆ ಯೋಜನೆಗಳು ಮತ್ತು ಖಾಸಗಿ ಕಂಪನಿಗಳ ಯೋಜನೆಗಳ ಸಂಬಂಧದಲ್ಲಿ, ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿಯ ಪರವಾಗಿ ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆ ಮತ್ತು ಪರಿಹಾರದ ನಿಬಂಧನೆಗಳ ಬಗ್ಗೆ ತೀರ್ಮಾನ ತೆಗೆದುಕೊಳ್ಳುವುದಕ್ಕೆ ಅಥವಾ ನಿರ್ಧಾರ ಮಾಡುವುದಕ್ಕೆ ಸಕ್ಷಮವಾದ ಪ್ರತಿನಿಧಿಗಳು ಮತ್ತು ಸಾಮಾಜಿಕ ಪರಿಣಾಮ ನಿರ್ಧರಣಾ ತಂಡದ ಸದಸ್ಯರು, ಅಂಥ ಎಲ್ಲ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರು ಅಥವಾ ಭೂಮಿಯ ಅಧಿಭೋಗದಾರರು ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರು ಸಭೆಗಳಲ್ಲಿ ಹಾಜರಿರತಕ್ಕದ್ದು ಮತ್ತು ಅಂಥ ಯಾರೇ ವ್ಯಕ್ತಿಗಳು ಕೇಳುವ ಪ್ರಶ್ನೆಗಳಿಗೆ ಸ್ಪಷ್ಟವಾದ ಉತ್ತರವನ್ನು ಕೊಡತಕ್ಕದ್ದು. ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿಯು ಒಪ್ಪಿಕೊಂಡಿರುವ ಪುನರ್‌ವಸತಿ ಮತ್ತು ಪುನರ್‌ವ್ಯವಸ್ಥೆ, ಪರಿಹಾರ ಮತ್ತು ಇತರ ಮಾನದಂಡಗಳ ನಿಬಂಧನೆಗಳು ಮತ್ತು ಷರತ್ತುಗಳು, ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರಿಗೆ ಅಥವಾ ಭೂಮಿಯ ಅಧಿಭೋಗದಾರರಿಗೆ ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರಿಗೆ ಸ್ಥಳೀಯ ಭಾಷೆಯಲ್ಲಿ ವಿವರಿಸತಕ್ಕದ್ದು ಮತ್ತು ಸಂದರ್ಭಾನುಸಾರ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರಿಂದ ಅಥವಾ ಸಂಬಂಧಿಸಿದ ಭೂಮಿಯ ಅಧಿಭೋಗದಾರರಿಂದ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರಿಂದ ಹಾಗೂ ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿಯ ಪ್ರತಿನಿಧಿಗಳು ಅಂಥ ನಿಬಂಧನೆ ಮತ್ತು ಷರತ್ತುಗಳ ಮೇಲೆ ತಮ್ಮ ಸಹಿಗಳನ್ನು ಮಾಡತಕ್ಕದ್ದು.

(8) ಸಭೆಯ ಮುಕ್ತಾಯದಲ್ಲಿ, ಪ್ರತಿಯೊಬ್ಬ ವೈಯಕ್ತಿಕ ಭೂಮಾಲೀಕನನ್ನು ಅಥವಾ ಭೂಮಿಯ ಅಧಿಭೋಗದಾರನನ್ನು ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರನ್ನು ತಮ್ಮ ಭೂಮಿಯ ಸ್ವಾಧೀನತೆ ಒಳಗೊಳ್ಳುವುದಕ್ಕಾಗಿ ತನ್ನ ಪೂರ್ವ ಸಮ್ಮತಿಯನ್ನು ನೀಡಿದ್ದಾನೋ ಅಥವಾ ಇಲ್ಲವೋ ಎಂಬುದನ್ನು ಘೋಷಿಸುವ ನಮೂನೆ IV ಭಾಗ ಎ ಯಲ್ಲಿ ಸಹಿ ಮಾಡುವಂತೆ ಕೇಳಿಕೊಳ್ಳತಕ್ಕದ್ದು. ನಿಬಂಧನೆ ಮತ್ತು ಷರತ್ತುಗಳೊಂದಿಗೆ ಸಹಿಯಾದ ಘೋಷಣೆಯ ಪ್ರತಿಯನ್ನು ಸಂದರ್ಭಾನುಸಾರ ಭೂಮಾಲೀಕನಿಗೆ ಅಥವಾ ಸಂಬಂಧಿಸಿದ ಭೂಮಿಯ ಅಧಿಭೋಗದಾರನಿಗೆ ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವನಿಗೆ ಲಭ್ಯವಾಗುವಂತೆ ಮಾಡತಕ್ಕದ್ದು. ಸಹಿಯಾದ ಘೋಷಣೆಗಳನ್ನು ಅದರ ಸ್ವೀಕೃತಿಯ ಮೇಲೆ ಜಿಲ್ಲಾಧಿಕಾರಿಗಳು ಮೇಲು ರುಜು ಹಾಕತಕ್ಕದ್ದು.

(9) ಭೂಮಾಲೀಕರ ಸಭೆಗಳಿಗೆ ಹಾಜರಾಗಲು ಸಾಧ್ಯವಾಗದಿರುವ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರುಗಳು ಅಥವಾ ಭೂಮಿಯ ಅಧಿಭೋಗದಾರರು ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರಿಗೆ ಸಂದರ್ಭಾನುಸಾರ ಭೂಮಾಲೀಕರು ಅಥವಾ ಭೂಮಿಯ ಅಧಿಭೋಗದಾರರು ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರಿಗೆ ನಡೆದ ಸಭೆಯ ದಿನಾಂಕದಿಂದ ಹದಿನೈದು ದಿನಗಳೊಳಗೆ ಸಹಿ ಮಾಡಿದ ಘೋಷಣೆಯನ್ನು ಅವರು ಜಿಲ್ಲಾಧಿಕಾರಿಗೆ ಸಲ್ಲಿಸುವುದಕ್ಕೆ ಸಾಧ್ಯವಾಗುವಂತೆ ಏರ್ಪಾಡುಮಾಡತಕ್ಕದ್ದು. ಸಹಿ ಮಾಡಿದ ಘೋಷಣೆಯ ನಮೂನೆಯ ಮೇಲೆ ಮತ್ತು ಅದರ ಸ್ವೀಕೃತಿಯ ಮೇಲೆ ಜಿಲ್ಲಾಧಿಕಾರಿಗಳು ಮೇಲು ರುಜು ಮಾಡಿರತಕ್ಕದ್ದು ಮತ್ತು ಸಹಿಯಾದ ಪ್ರತಿ ಮತ್ತು ಮೇಲು ರುಜುವಾಗಿರುವ ಘೋಷಣೆಯ ಪ್ರತಿ, ನಿಬಂಧನೆ ಮತ್ತು ಷರತ್ತುಗಳೊಂದಿಗೆ ಸಂದರ್ಭಾನುಸಾರ ಅಂಥ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕ ಅಥವಾ ಭೂಮಿಯ ಅಧಿಭೋಗದಾರ ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರರಿಗೆ ಅದರ ಪ್ರತಿಗಳನ್ನು ನೀಡತಕ್ಕದ್ದು.

(10) ಪೂರ್ವ ಸಮ್ಮತಿಯನ್ನು, ಸಂದರ್ಭಾನುಸಾರ ಅಂಥ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರ ಅಥವಾ ಭೂಮಿಯ ಅಧಿಭೋಗದಾರರ ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರ ಸಹಿಯಾಗಿರುವ ಮತ್ತು ಮೇಲುರುಜುವಾಗಿರುವ ಲಿಖಿತ ಘೋಷಣೆಯ ಆಧಾರದ ಮೇಲೆ ನಿರ್ಧರಿಸತಕ್ಕದ್ದು.

(11) (7)ನೇ ಉಪನಿಯಮದ ಮೇರೆಗೆ ಸಭೆಗಳು ನಡೆಯುವಲ್ಲಿ, ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರು ಅಥವಾ ಭೂಮಿಯ ಅಧಿಭೋಗದಾರರು ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರ ಪೂರ್ವ ಸಮ್ಮತಿಯ ಎಲ್ಲ ವ್ಯವಹರಣೆಗಳನ್ನು ವಿಡಿಯೋ ಚಿತ್ರಣದಲ್ಲಿ ದಾಖಲು ಮಾಡತಕ್ಕದ್ದು ಮತ್ತು ಅಂಥ ಎಲ್ಲಾ ವ್ಯವಹರಣೆಗಳನ್ನು ಲಿಖಿತದಲ್ಲಿ ದಾಖಲಿಸತಕ್ಕದ್ದು. ಮೇಲೆ ಹೇಳಿದ ವಿಧಾನದಲ್ಲಿ ಯಾರೇ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರು ಒಂದು ಬಾರಿ ನೀಡಿದ ಸಮ್ಮತಿಯನ್ನು ಹಿಂಪಡೆಯತಕ್ಕದ್ದಲ್ಲ. ಪೂರ್ವ ಸಮ್ಮತಿಯ ತೀರ್ಮಾನದ ಪ್ರತಿಯೂ, ಗ್ರಾಮ ಪಂಚಾಯಿತಿಯ ಅಧಿಕಾರಿಗಳ/ವಾರ್ಡ್ ಅಧಿಕಾರಿಗಳ/ಪುರಸಭೆಗಳ ಅಧಿಕಾರಿಗಳಲ್ಲಿ ಯಾರ್‍ಯಾರಿಗೇ ಅನ್ವಯವಾಗುತ್ತದೆ ಅವರಲ್ಲಿ ಮತ್ತು ರಾಜ್ಯ ಸರ್ಕಾರದ ವೆಬ್‌ಸೈಟ್‌ನಲ್ಲಿಯೂ ಲಭ್ಯವಾಗುವಂತೆ ಮಾಡತಕ್ಕದ್ದು.

**17. ಅಧಿಸೂಚಿಸದ ಪ್ರದೇಶಗಳಲ್ಲಿ ಸಾರ್ವಜನಿಕ-ಖಾಸಗಿ ಯೋಜನೆಗಳಿಗಾಗಿ ಮತ್ತು ಖಾಸಗಿ ಯೋಜನೆಗಳಿಗಾಗಿ ಭೂಮಿಯ ಸ್ವಾಧೀನತೆಗಾಗಿ ಗ್ರಾಮಸಭಾದೊಂದಿಗೆ ಸಮಾಲೋಚಿಸುವುದು.**– (1) ಅಧಿಸೂಚಿಸಿರದ ಪ್ರದೇಶದಲ್ಲಿ ಭೂಮಿಯ ಸ್ವಾಧೀನತೆಯ ಸಂಬಂಧದಲ್ಲಿ ಮಾತ್ರವೇ ಗ್ರಾಮಸಭಾವನ್ನು ಅಗತ್ಯವಾಗಿ ಸಮಾಲೋಚಿಸುವುದು.

**18. ಪೂರ್ವಸಮ್ಮತಿ ಪ್ರಕ್ರಿಯೆಗಳಲ್ಲಿ ರಾಜ್ಯ ಸರ್ಕಾರದ ಪಾತ್ರ ಮತ್ತು ಹೊಣೆಗಾರಿಕೆಗಳು.–** (1) ರಾಜ್ಯ ಸರ್ಕಾರ ಅಥವಾ ಅಧಿಕೃತ ಅಧಿಕಾರಿಯು ವಿಶೇಷ ಗ್ರಾಮ ಸಭೆಗಳ ಪಂಚಾಯಿತಿಗಳ ಸಭೆಗಳನ್ನು ನಡೆಸುವುದಕ್ಕೆ (ಎಲ್ಲಿ ಗ್ರಾಮ ಸಭೆಗಳು ಅಸ್ತಿತ್ವದಲ್ಲಿರದ ಅಥವಾ ಗ್ರಾಮ ಸಭೆಗಳು ರಚಿತವಾಗಿರದ ಸಂದರ್ಭದಲ್ಲಿ) ದಿನಾಂಕ, ಸಮಯ ಮತ್ತು ಸ್ಥಳವನ್ನು ಪ್ರಕಟಿಸುವುದು ಮತ್ತು ಅಧಿಸೂಚಿಸತಕ್ಕದ್ದು ಮತ್ತು ಪೂರ್ವಸಮ್ಮತಿ ಪಡೆಯುವುದಕ್ಕಾಗಿ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರ ಅಥವಾ ಭೂಮಿಯ ಅಧಿಭೋಗದಾರರ ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರ ಸಭೆಗಳನ್ನು ಸಂದರ್ಭಾನುಸಾರ ನಡೆಸುವುದಕ್ಕೆ ಮತ್ತು ಪೂರ್ವಸಮ್ಮತಿ ಪ್ರಕ್ರಿಯೆಯಲ್ಲಿ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರುಗಳು ಭಾಗವಹಿಸುವುದನ್ನು ಪ್ರೋತ್ಸಾಹಿಸುವ ಸಲುವಾಗಿ ಸಾರ್ವಜನಿಕ ಜಾಗೃತಿ ಆಂದೋಲನಗಳನ್ನು ಏರ್ಪಾಡು ಮಾಡತಕ್ಕದ್ದು.

(2) ರಾಜ್ಯ ಸರ್ಕಾರ ಅಥವಾ ಅಧಿಕೃತ ಅಧಿಕಾರಿಯು, ಯಾರಲ್ಲಿ ಪೂರ್ವ ಸಮ್ಮತಿಯನ್ನು ಕೋರಲಾಗುತ್ತದೆಯೋ ಆ ಪ್ರತಿಯೊಬ್ಬ ಸದಸ್ಯನಿಗೆ ಸ್ಥಳೀಯ ಭಾಷೆಯಲ್ಲಿ ಈ ಮುಂದಿನವುಗಳನ್ನು ಕೊನೆ ಪಕ್ಷ ಮೂರು ವಾರಗಳ ಮುಂಚಿತವಾಗಿ ಒದಗಿಸಲು ಖಚಿತಪಡಿಸತಕ್ಕದ್ದು, ಎಂದರೆ:–

(ಎ) ಸ್ಥಳೀಯ ಭಾಷೆಯಲ್ಲಿ ಸಾಮಾಜಿಕ ಪರಿಣಾಮ ನಿರ್ಧರಣಾ ವರದಿ ಈಗಾಗಲೇ ಲಭ್ಯವಿದ್ದರೆ) ಕರಡಿನ ಒಂದು ಪ್ರತಿ;

(ಬಿ) ಪರಿಹಾರ ಮತ್ತು ಪುನರ್‌ವಸತಿ ಮತ್ತು ಪುನರ್ ವ್ಯವಸ್ಥೆಗಾಗಿ ನೀಡಲಾಗುವ ಪ್ರಾರಂಭಿಕ ಪ್ಯಾಕೇಜ್‌ನ ಒಂದು ಪ್ರತಿ;

(ಸಿ) ಗ್ರಾಮ ಮತ್ತು ಅದರ ನಿವಾಸಿಗಳು ಉಪಭೋಗಿಸುತ್ತಿರುವ ರೆವಿನ್ಯೂ ಕಾನೂನುಗಳ, ಅರಣ್ಯ ಹಕ್ಕುಗಳ ಅಧಿನಿಯಮ ಮತ್ತು ಇತರ ಶಾಸನಗಳ ಅಡಿಯಲ್ಲಿ ಚಾಲ್ತಿಯಲ್ಲಿರುವ ಹಕ್ಕುಗಳ ಪಟ್ಟಿ;

(3) ಜಿಲ್ಲಾಧಿಕಾರಿ ಅಥವಾ ಯಾರೇ ಅಧಿಕೃತ ಅಧಿಕಾರಿಯು, ವಿಶೇಷಗ್ರಾಮ ಸಭಾಗಳ, ಪಂಚಾಯಿತಿಗಳ (ಎಲ್ಲಿ ಗ್ರಾಮಸಭೆಯು ಅಸ್ತಿತ್ವದಲ್ಲಿರದ ಅಥವಾ ಗ್ರಾಮ ಸಭೆ ರಚಿತವಾಗಿರದ ಸಂದರ್ಭದಲ್ಲಿ) ಮತ್ತು ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂಮಾಲೀಕರ ಅಥವಾ ಭೂಮಿಯ ಅಧಿಭೋಗದಾರರ ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರು ಸಭೆಗಳಲ್ಲಿ ಹಾಜರಿರತಕ್ಕದ್ದು.

(4) ರಾಜ್ಯ ಸರ್ಕಾರ ಅಥವಾ ಅಧಿಕೃತ ಅಧಿಕಾರಿಯು, ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂ ಮಾಲೀಕರ ಅಥವಾ ಭೂಮಿಯ ಅಧಿಭೋಗದಾರರ ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರಿಗೆ ಸಾಮಾಜಿಕ ಪರಿಣಾಮ ನಿರ್ಧರಣೆಗೆ ಸಂಬಂಧಿಸಿದ ಎಲ್ಲ ದಾಖಲೆಗಳು ಲಭ್ಯವಾಗುವಂತೆ ಮಾಡಿರುವುದನ್ನು ಮತ್ತು ಕೋರಲಾದ ಎಲ್ಲ ಮಾಹಿತಿಗಳನ್ನು ಒದಗಿಸಿರುವುದನ್ನು ಖಚಿತಪಡಿಸತಕ್ಕದ್ದು.

**19. ಭೂಮಾಲೀಕರ ಪೂರ್ವಸಮ್ಮತಿಗಾಗಿ ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿಯ ಪಾತ್ರ ಮತ್ತು ಹೊಣೆಗಾರಿಕೆಗಳು.–** ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿಯು, ಪರಿಹಾರ ಮತ್ತು ಪುನರ್‌ವಸತಿ ಮತ್ತು ಪುನರ್ ವ್ಯವಸ್ಥೆಯ ವರ್ಗಾಯಿಸುವ ನಿಬಂಧನೆಗಳ ಮತ್ತು ಷರತ್ತುಗಳ ಮತ್ತು ತೀರ್ಮಾನಗಳನ್ನು ತೆಗೆದುಕೊಳ್ಳಲು ಸಕ್ಷಮ ಪ್ರತಿನಿಧಿಗಳನ್ನು ಅಧಿಕೃತಗೊಳಿಸತಕ್ಕದ್ದು, ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಭೂ ಮಾಲೀಕರ ಅಥವಾ ಭೂಮಿಯ ಅಧಿಭೋಗದಾರರ ಅಥವಾ ಭೂಮಿಯ ಮೇಲಿನ ಹಿತಾಸಕ್ತಿ ಹೊಂದಿರುವವರ ಸಭೆಗಳಲ್ಲಿ ಮತ್ತು ಅಂಥ ಭೂ ಮಾಲೀಕರುಗಳು ಎತ್ತುವ ಆಕ್ಷೇಪಗಳಿಗೆ ಉತ್ತರಿಸಲು ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿಯು ಸಕ್ಷಮ ಪ್ರತಿನಿಧಿಗಳು ಹಾಜರಿರತಕ್ಕದ್ದು. ಭೂಮಿಯ ಅಗತ್ಯ ಇರುವ ಸಂಸ್ಥೆ/ವ್ಯಕ್ತಿಯು, ಪೂರ್ವ ಸಮ್ಮತಿಯನ್ನು ಪಡೆಯುವ ಮೊದಲು ಪ್ರಾಜೆಕ್ಟ್ ಬಗ್ಗೆ ಅದರ ಎಲ್ಲಾ ಮಾಹಿತಿಯನ್ನು ಸಂದರ್ಭಾನುಸಾರ ಯಾವುದೇ ಹೆಚ್ಚುವರಿ ಮಾಹಿತಿ ಅಗತ್ಯವಿದ್ದಲ್ಲಿ ಒದಗಿಸತಕ್ಕದ್ದು.

## ಅಧ್ಯಾಯ – IV

## ಸ್ವಾಧೀನತೆಗಾಗಿ ಪ್ರಾರಂಭಿಕ ಅಧಿಸೂಚನೆ

**20.** (1) 11ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ಪ್ರಾರಂಭಿಕ ಅಧಿಸೂಚನೆಯನ್ನು ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿನ ಗ್ರಾಮ ಪಂಚಾಯತ್ ಕಚೇರಿ ಮತ್ತು ಗ್ರಾಮ ಲೆಕ್ಕಿಗನ ಕಚೇರಿಯಲ್ಲಿ ಲಿಖಿತ ನೋಟೀಸನ್ನು ಅಂಟಿಸುವ ಮೂಲಕ ಪ್ರಕಟಿಸತಕ್ಕದ್ದು.

(2) 11ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ನೋಟೀಸು ಜಾರಿಯಾದನಂತರ, ಜಿಲ್ಲಾಧಿಕಾರಿಗಳು ಭೂದಾಖಲೆಗಳನ್ನು ಇಂದೀಕರಿಸುವ ನಿರ್ವಹಣೆಯನ್ನು ಪೂರ್ಣಗೊಳಿಸಲು ಕ್ರಮಕೈಗೊಳ್ಳತಕ್ಕದ್ದು.

## ಅಧ್ಯಾಯ – V

## ಪುನರ್‌ವಸತಿ ಮತ್ತು ಪುನರ್ ವ್ಯವಸ್ಥೆ ಯೋಜನೆ

**21. ಆಡಳಿತಾಧಿಕಾರಿಯಿಂದ ಪುನರ್‌ವಸತಿ ಮತ್ತು ಪುನರ್ ವ್ಯವಸ್ಥೆ ಯೋಜನೆಯ ಸಿದ್ಧತೆಗಳು.–** (1) 11ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳಿಂದ, ಪ್ರಾರಂಭಿಕ ಅಧಿಸೂಚನೆಯನ್ನು ಪ್ರಕಟಿಸಿದ ತರುವಾಯ, ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆಗಾಗಿನ ಆಡಳಿತಧಿಕಾರಿಯು, 11ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಪ್ರಾರಂಭಿಕ ಅಧಿಸೂಚನೆ ಪ್ರಕಟವಾದ ದಿನಾಂಕದಿಂದ ಮೂರು ತಿಂಗಳ ಅವಧಿಯೊಳಗಾಗಿ ಸ್ವತಃ ತಾನೇಯಾಗಲಿ ಅಥವಾ ಅಧಿಕೃತಗೊಳಿಸಿದ ಯಾರೇ ಅಧಿಕಾರಿಯ ಮೂಲಕ ಸಂತ್ರಸ್ತ ಕುಟುಂಬಗಳ ಗಣತಿಯನ್ನು ಕೈಗೊಳ್ಳಲು ಮತ್ತು ಸಮೀಕ್ಷೆಯನ್ನು ಮಾಡಲು ಕ್ರಮಕೈಗೊಳ್ಳತಕ್ಕದ್ದು.

(2) ನಡೆಸಿದ ಸಮೀಕ್ಷೆ ಮತ್ತು ಆಡಳಿತಾಧಿಕಾರಿ ಹಾಗೆ ಕೈಗೊಳ್ಳುವ ಸಂತ್ರಸ್ತ ಕುಟುಂಬಗಳ ಜನಗಣತಿಯಲ್ಲಿ ಆತ, ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನ ವರದಿ ಆಧರಿಸಿ ಅಂಕಿಅಂಶ ಸಂಗ್ರಹಿಸತಕ್ಕದ್ದು ಮತ್ತು ಗ್ರಾಮ ಪಂಚಾಯಿತಿ ಹಾಗೂ ಸರ್ಕಾರಿ ದಾಖಲೆಗಳಿಂದ ಸಹ ಅಂಕಿಅಂಶ ಸಂಗ್ರಹಿಸತಕ್ಕದ್ದು ಮತ್ತು ಸಂತ್ರಸ್ತ ಕುಟುಂಬಗಳ ಮನೆಮನೆಗೆ ಭೇಟಿ ನೀಡುವ ಮೂಲಕ ಹಾಗೂ ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಮೂಲಸೌಕರ್ಯ ಉತ್ತಮವಾಗಿದ್ದರೆ ಅಂಥ ಪ್ರಕರಣದಲ್ಲಿ ಕ್ಷೇತ್ರ ಭೇಟಿಗಳನ್ನು ನೀಡುವ ಮೂಲಕ ಹಾಗೆ ಸಂಗ್ರಹಿಸಲಾಗಿರುವ ಅಂಕಿಅಂಶವನ್ನು ತಾಳೆ ಮಾಡತಕ್ಕದ್ದು ಹಾಗೂ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಕರಡು ಪರಿಯೋಜನೆ ಸಿದ್ಧಪಡಿಸತಕ್ಕದ್ದು.

(3) ಆಡಳಿತಾಧಿಕಾರಿ ಸಿದ್ಧಪಡಿಸುವ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಕರಡು ಪರಿಯೋಜನೆಯು ಅಧಿನಿಯಮದ 16ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಹೇಳಿರುವ ವಿವರಗಳೊಂದಿಗೆ ಈ ಮುಂದಿನ ಪಟ್ಟಿಗಳನ್ನು ಒಳಗೊಂಡಿರತಕ್ಕದ್ದು; ಎಂದರೆ:–

I ನಿರಾಶ್ರಿತ ಕುಟುಂಬಗಳು ಮತ್ತು ನಿರಾಶ್ರಿತರಾಗುವ ಸಂಭವವಿರುವ ಕುಟುಂಬಗಳ ಪಟ್ಟಿ

II ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿರುವ ಮೂಲಸೌಕರ್ಯದ ಪಟ್ಟಿ

III ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿರುವ ಭೂಹಿಡುವಳಿಯ ಪಟ್ಟಿ

IV ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿರುವ ವ್ಯಾಪಾರದಾರರ ಪಟ್ಟಿ

V ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿರುವ ಭೂ ರಹಿತರ ಪಟ್ಟಿ

VI ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿರುವ ಅನುಕೂಲವಂಚಿತ ಸಮೂಹಗಳಾದ ಪರಿಶಿಷ್ಟ ಜಾತಿಗಳು ಅಥವಾ ಪರಿಶಿಷ್ಟ ಪಂಗಡಗಳಿಗೆ ಸೇರಿದ ವ್ಯಕ್ತಿಗಳು, ಅಂಗವಿಕಲರ ಪಟ್ಟಿ

VII ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿರುವ ಭೂ ರಹಿತ ಕೃಷಿ ಕಾರ್ಮಿಕರ ಪಟ್ಟಿ

VIII ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿರುವ ಉದ್ಯೋಗಾಕಾಂಕ್ಷಿ ಯುವಜನರ ಪಟ್ಟಿ

(4) ಆಡಳಿತಾಧಿಕಾರಿಯು, ಮುಂದೆ ಬರಬಹುದಾದ ಆಕ್ಷೇಪಣೆಗಳನ್ನು ಕಡಿಮೆಗೊಳಿಸುವ ದೃಷ್ಟಿಯಿಂದ ಸಾಧ್ಯವಾದಷ್ಟು ಸಮಗ್ರ ಮತ್ತು ಸವಿವರ ಕರಡು ಪರಿಯೋಜನೆ ಸಿದ್ಧಪಡಿಸತಕ್ಕದ್ದು.

(5) ಆಡಳಿತಾಧಿಕಾರಿ, ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಪ್ರಸಾರದಲ್ಲಿರುವ ಎರಡು ಸ್ಥಳೀಯ ದಿನಪತ್ರಿಕೆಗಳ ಮೂಲಕ ಜನರಿಗೆ ಆತ ಅಧಿನಿಯಮದ 16ನೇ ಪ್ರಕರಣದ (2)ನೇ ಉಪ ಪ್ರಕರಣದ ಮೇರೆಗೆ ಸಿದ್ಧಪಡಿಸುತ್ತಿರುವ ಕರಡು ಪರಿಯೋಜನೆ ಕುರಿತು ಮಾಹಿತಿ ನೀಡತಕ್ಕದ್ದು.

(6) ಆಡಳಿತಾಧಿಕಾರಿ ಅಥವಾ ಆತ ಗೊತ್ತುಪಡಿಸಿರುವ ಒಬ್ಬ ಅಧಿಕಾರಿ ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಆತ ಸೂಕ್ತವೆಂದು ಭಾವಿಸುವ ದಿನಾಂಕದಂದು, ಆದರೆ ಆತ 16ನೇ ಪ್ರಕರಣದ (2)ನೇ ಉಪ–ಪ್ರಕರಣದ ಮೇರೆಗೆ ಸಿದ್ಧಪಡಿಸಿದ ಪರಿಯೋಜನೆ ಪ್ರಕಟವಾದ ಹದಿನೈದು ದಿನಗಳಿಗಿಂತ ಮುಂಚಿತವಲ್ಲದಂತೆ ಒಂದು ಸಾರ್ವಜನಿಕ ಅಹವಾಲು ಸ್ವೀಕಾರ ಕಾರ್ಯಕ್ರಮ ಏರ್ಪಡಿಸತಕ್ಕದ್ದು. ಸಾರ್ವಜನಿಕ ಅಹವಾಲು ಸ್ವೀಕಾರ ಸಂಬಂಧಿಸಿದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ 16ನೇ ಪ್ರಕರಣದ (5)ನೇ ಉಪ ಪ್ರಕರಣದ ಉಪಬಂಧಗಳಿಗನುಸಾರವಾಗಿ ನಡೆಸುವ ಸಾರ್ವಜನಿಕ ಅಹವಾಲು ಸ್ವೀಕಾರ ಕಾರ್ಯಕ್ರಮಕ್ಕೆ ಅನ್ವಯವಾಗತಕ್ಕದ್ದು.

**22(ಎ). ಆಡಳಿತಾಧಿಕಾರಿಯ ಅಧಿಕಾರಗಳು, ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳು.–** (1) ಆಡಳಿತಾಧಿಕಾರಿಯು ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಈ ಮುಂದಿನ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ;

(ಎ) ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನಕ್ಕೆ ಸಂಬಂಧಿಸಿದ ಮೂಲಾಧಾರ ಅಂಕಿಅಂಶವನ್ನು (ಬೇಸ್ ಡಾಟಾ) ಸಂಗ್ರಹಿಸತಕ್ಕದ್ದು ಮತ್ತು ಸಿದ್ಧಪಡಿಸತಕ್ಕದ್ದು ಹಾಗೂ ಅದನ್ನು ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನ ಮಾಡುವ ಏಜೆನ್ಸಿಗೆ ಲಭ್ಯವಾಗುವಂತೆ ಮಾಡತಕ್ಕದ್ದು;

(ಬಿ) ಜಿಲ್ಲೆಯಲ್ಲಿ ನಡೆಯುವ ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನ ಪ್ರಕ್ರಿಯೆಗೆ ಸಮನ್ವಯ ಕಲ್ಪಿಸುವುದು;

(ಸಿ) ರಾಜ್ಯ ಸರ್ಕಾರ 4ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಹೊರಡಿಸುವ ಅಧಿಸೂಚನೆಯನ್ನು ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಪ್ರಕಟಿಸುವುದು;

(ಡಿ) ಸಾಮಾಜಿಕ ಪರಿಣಾಮ ನಿರ್ಧರಣಾ ವರದಿಯ ಸಾರಾಂಶವನ್ನು ನಿಯಮಗಳಲ್ಲಿ ಉಪಬಂಧಿಸಿರುವ ರೀತಿಗಳಲ್ಲಿ ಪ್ರಕಟಿಸುವುದು;

(ಇ) ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನ ಪ್ರಕ್ರಿಯೆಯಲ್ಲಿ ಸಾರ್ವಜನಿಕ ಅಹವಾಲು ಸ್ವೀಕಾರ ಕಾರ್ಯಕ್ರಮಗಳನ್ನು ನಡೆಸುವುದಕ್ಕೆ ಸಂಬಂಧಿಸಿದಂತೆ ನೋಟೀಸುಗಳನ್ನು ನೀಡುವುದು.

(ಎಫ್) ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನದ ಸಂದರ್ಭದಲ್ಲಿ ಸಾರ್ವಜನಿಕ ಅಹವಾಲು ಸ್ವೀಕಾರ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು;

(ಜಿ) ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನದ ಕರಡು ವರದಿಯು ಸಂತ್ರಸ್ತ ಕುಟುಂಬಗಳು ಹಾಗೂ ಸಂಬಂಧಪಟ್ಟ ಇತರರಿಗೆ ಲಭ್ಯವಾಗುವಂತೆ ಮಾಡುವುದು.

(ಹೆಚ್) ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನ ವರದಿಯ ಮೌಲ್ಯನಿರ್ಧರಣೆ ಮಾಡುವ ತಜ್ಞರ ಗುಂಪಿನ ಸಭೆಯಲ್ಲಿ ಭಾಗವಹಿಸುವುದು;

(ಐ) ತಜ್ಞರ ಗುಂಪಿನ ಶಿಫಾರಸುಗಳನ್ನು ನಿಯಮಗಳಲ್ಲಿ ಉಪಬಂಧಿಸಿರುವ ರೀತಿಗಳಲ್ಲಿ ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಪ್ರಕಟಿಸುವುದು;

(ಜೆ) ಭೂ ಸ್ವಾಧೀನ ಕುರಿತ ಸಮುಚಿತ ಸರ್ಕಾರದ ನಿರ್ಣಯವನ್ನು ನಿಯಮಗಳಲ್ಲಿ ಉಪಬಂಧಿಸಿರುವ ರೀತಿಗಳಲ್ಲಿ ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಪ್ರಕಟಿಸುವುದು;

(ಕೆ) ಸಮೀಕ್ಷೆ ಮತ್ತು ಸಂತ್ರಸ್ತ ಕುಟುಂಬಗಳ ಜನಗಣತಿಯನ್ನು ನಿಯಮಗಳಲ್ಲಿ ಉಪಬಂಧಿಸಿರುವ ರೀತಿ ಹಾಗೂ ಕಾಲಮಿತಿಯೊಳಗೆ ನಡೆಸುವುದು;

(ಎಲ್) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕರಡು ಪರಿಯೋಜನೆ ಸಿದ್ಧಪಡಿಸುವುದು;

(ಎಮ್) ಜನರಿಗೆ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕರಡು ಪರಿಯೋಜನೆ ಕುರಿತು ನಿಯಮಗಳಲ್ಲಿ ಉಪಬಂಧಿಸುವ ರೀತಿಗಳಲ್ಲಿ ಅರಿವು ಮೂಡಿಸುವುದು:

(ಎನ್) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕರಡು ಪರಿಯೋಜನೆ ಸಂಬಂಧಪಟ್ಟ ವ್ಯಕ್ತಿಗಳು ಹಾಗೂ ಪ್ರಾಧಿಕಾರಿಗಳಿಗೆ ದೊರೆಯುವಂತೆ ಮಾಡುವುದು.

(ಒ) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕರಡು ಪರಿಯೋಜನೆ ಮೇಲೆ ಸಾರ್ವಜನಿಕ ಅಹವಾಲು ಸ್ವೀಕರಿಸುವುದಕ್ಕೆ ಸಂಬಂಧಿಸಿದಂತೆ ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ನೋಟೀಸುಗಳನ್ನು ನೀಡುವುದು ಮತ್ತು ಪ್ರಕಟಿಸುವುದು;

(ಪಿ) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕರಡು ಪರಿಯೋಜನೆ ಮೇಲೆ ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿ ಸಾರ್ವಜನಿಕ ಅಹವಾಲು ಸ್ವೀಕಾರ ಕಾರ್ಯಕ್ರಮಗಳನ್ನು ಏರ್ಪಡಿಸುವುದು;

(ಕ್ಯು) ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕರಡು ಪರಿಯೋಜನೆ ಮೇಲೆ ಸಲಹೆಗಳನ್ನು ನೀಡುವುದಕ್ಕೆ ಮತ್ತು ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದಕ್ಕೆ ಒಂದು ಅವಕಾಶ ನೀಡುವುದು;

(ಆರ್) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕರಡು ಪರಿಯೋಜನೆಯನ್ನು ಜಿಲ್ಲಾಧಿಕಾರಿಗೆ ಸಲ್ಲಿಸುವುದು.

(ಎಸ್) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಅನುಮೋದಿತ ಪರಿಯೋಜನೆಯನ್ನು ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಪ್ರಕಟಿಸುವುದು;

(ಟಿ) ಪ್ರಾಧಿಕೃತಗೊಳಿಸಿರುವ ಅಧಿಕಾರಿಗೆ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಐತೀರ್ಪು ಸಿದ್ಧಪಡಿಸುವುದರಲ್ಲಿ ಸಹಾಯ ಮಾಡುವುದು ಮತ್ತು ನೆರವಾಗುವುದು;

(ಯು) ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಅಧ್ಯಯನದಲ್ಲಿನ ಪ್ರಗತಿಯ ಮೇಲ್ವಿಚಾರಣೆ ಮತ್ತು ಮೇಲುಸ್ತುವಾರಿ ನೋಡಿಕೊಳ್ಳುವುದು;

(ವಿ) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಅನುಷ್ಠಾನೋತ್ತರ ಲೆಕ್ಕಪರಿಶೋಧನೆಯಲ್ಲಿ ನೆರವಾಗುವುದು; ಮತ್ತು

(ಡಬ್ಲ್ಯು) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಗೆ ಸಂಬಂಧಿಸಿದಂತೆ ಮಾಡಬೇಕಿರುವ ಯಾವುದೇ ಇತರ ಕಾರ್ಯ ಅಥವಾ ಕಮೀಷನರ್ (ಪುನರ್ವಸತಿ ಮತ್ತು ಪುನರ್ವ್ಯವಸ್ಥೆ) ನೀಡುವ ನಿರ್ದೇಶನಗಳನ್ನು ನೆರವೇರಿಸುವುದು.

**22(ಬಿ). ಜಿಲ್ಲಾಧಿಕಾರಿಯ ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳು.–** ಜಿಲ್ಲಾಧಿಕಾರಿಯು, ರಾಜ್ಯ ಸರ್ಕಾರ ವಹಿಸಿಕೊಡಬಹುದಾದಂಥ ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳನ್ನು ನೆರವೇರಿಸತಕ್ಕದ್ದು.

**22(ಸಿ). ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಕಮೀಷನರ್ ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳು.–** ಕಮೀಷನರ್ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಇವರು ರಾಜ್ಯ ಸರ್ಕಾರ ವಹಿಸಿಕೊಡಬಹುದಾದಂಥ ಕರ್ತವ್ಯಗಳು ಮತ್ತು ಹೊಣೆಗಾರಿಕೆಗಳನ್ನು ನೆರವೇರಿಸತಕ್ಕದ್ದು.

**23. ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಮೂಲಾಂಶಗಳು.–** (1) ರಾಜ್ಯ ಸರ್ಕಾರ, ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಕಮೀಷನರ್, ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನ ತಂಡ ಗುರುತಿಸಿದ ಸಂತ್ರಸ್ತ ಕುಟುಂಬಗಳನ್ನು ಪರಿಗಣನೆಗೆ ತೆಗೆದುಕೊಂಡು 17(i)ನೇ ಪ್ರಕರಣದ ಅನುಸಾರ ಸಂತ್ರಸ್ತ ಕುಟುಂಬಗಳ ಸಮೀಕ್ಷೆ ಮತ್ತು ಜನಗಣತಿ ನಡೆಸುವ ಮೂಲಕ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಪ್ರಕ್ರಿಯೆ ಪ್ರಾರಂಭಿಸುವಂತೆ ನೋಡಿಕೊಳ್ಳತಕ್ಕದ್ದು.

(2) ಆಡಳಿತಾಧಿಕಾರಿ 17(2)ನೇ ಪ್ರಕರಣದ ಅನುಸಾರ ಸಿದ್ಧಪಡಿಸುವ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕರಡು ಪರಿಯೋಜನೆಯು ಸಾಮಾಜಿಕ ಪರಿಣಾಮ ನಿರ್ಧರಣಾ ತಂಡ ಸಿದ್ಧಪಡಿಸಿದ ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನೆಯನ್ನು ಆಧರಿಸಿರತಕ್ಕದ್ದು ಮತ್ತು ಅಧಿನಿಯಮದ 17(5)ನೇ ಪ್ರಕರಣದ ಮೇರೆಗೆ ಉಪಬಂಧಿಸಿರುವಂತೆ ಸಾರ್ವಜನಿಕ ಅಹವಾಲು ಸ್ವೀಕಾರ ಕಾರ್ಯಕ್ರಮಗಳನ್ನು ಏರ್ಪಡಿಸುವ ಮೂಲಕ ಗ್ರಾಮಸಭೆ ಅಥವಾ ಪುರಸಭೆಯೊಂದಿಗೆ ಸಮಾಲೋಚಿಸಿ ರೂಪಿಸತಕ್ಕದ್ದು.

(3) ಆಡಳಿತಾಧಿಕಾರಿಯು, ಸಾರ್ವಜನಿಕ ಅಹವಾಲು ಸ್ವೀಕಾರ ಕಾರ್ಯಕ್ರಮದಲ್ಲಿ ಸಲ್ಲಿಸಲಾದ ಆಕ್ಷೇಪಣೆಗಳು ಹಾಗೂ ಕ್ಲೇಮುಗಳ (ಮನವಿಗಳ) ದಾಖಲೆಯನ್ನು ನಿರ್ವಹಿಸತಕ್ಕದ್ದು ಹಾಗೂ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಕರಡು ಪರಿಯೋಜನೆಯನ್ನು ಮನವಿಗಳು ಹಾಗೂ ಆಕ್ಷೇಪಣೆಗಳ ಮೇಲೆ ಆತ/ ಆಕೆ ನೀಡಿರುವ ವರದಿಯೊಂದಿಗೆ ಸಾರ್ವಜನಿಕ ಅಹವಾಲು ಸ್ವೀಕಾರ ಕಾರ್ಯಕ್ರಮ ಮುಗಿದ 2 ವಾರಗಳ ನಂತರ ಜಿಲ್ಲಾಧಿಕಾರಿಗೆ ಸಲ್ಲಿಸತಕ್ಕದ್ದು.

(4) ಪುನರ್ವಸತಿಯ ಕರಡು ಪರಿಯೋಜನೆಯನ್ನು ಪಡೆದುಕೊಂಡ ಮೇಲೆ 4 ವಾರಗಳೊಳಗೆ ಜಿಲ್ಲಾಧಿಕಾರಿಯು, ಯೋಜನಾ ಮಟ್ಟದಲ್ಲಿ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಸಮಿತಿಯ ಸಭೆ ಆಯೋಜಿಸತಕ್ಕದ್ದು ಮತ್ತು ಪರಿಯೋಜನೆ ಕುರಿತು ಚರ್ಚಿಸತಕ್ಕದ್ದು. ಆನಂತರ ಪರಿಯೋಜನೆಯನ್ನು ತನ್ನ ಸಲಹೆಗಳ ಸಹಿತ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕಮೀಷನರ್‌ಗೆ ಸಲ್ಲಿಸತಕ್ಕದ್ದು.

(5) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕಮೀಷನರ್ ಜಿಲ್ಲಾಧಿಕಾರಿ ಸಲ್ಲಿಸಿದ ಪರಿಯೋಜನೆಯನ್ನು ಪರಿಶೀಲನೆ ಮಾಡಿದ ನಂತರ ಪರಿಯೋಜನೆಗೆ ಅನುಮೋದನೆ ನೀಡತಕ್ಕದ್ದು ಮತ್ತು ಅದು, 4 ವಾರದೊಳಗೆ ಅಧಿನಿಯಮದ 19ನೇ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡತಕ್ಕದ್ದು.

(6) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕಮೀಷನರ್ ಅನುಮೋದಿಸಿದ ಪರಿಯೋಜನೆಯ ಸಾರಾಂಶವನ್ನು ಅಧಿನಿಯಮದ 20ನೇ ಪ್ರಕರಣದ ಮೇರೆಗೆ ಭೂ ಸ್ವಾಧೀನಕ್ಕೆ ಸಂಬಂಧಿಸಿದ ಘೋಷಣೆಯಲ್ಲಿ ಅಧಿಸೂಚಿಸತಕ್ಕದ್ದು.

**24. ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕಮೀಷನರ್ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಅನುಮೋದಿತ ಪರಿಯೋಜನೆಯನ್ನು ಪ್ರಕಟಿಸುವುದು.–** (1) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕಮೀಷನರ್ ಸಾರ್ವಜನಿಕ ನೋಟೀಸು ನೀಡುವ ಮೂಲಕ, ಅಧಿನಿಯಮದ 18ನೇ ಪ್ರಕರಣದ ಮೇರೆಗೆ ಆತ ಅಂತಿಮಗೊಳಿಸಿರುವ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಅನುಮೋದಿತ ಪರಿಯೋಜನೆಯನ್ನು ಜನರ ಗಮನಕ್ಕೆ ತರುವುದಕ್ಕೆ ಸಂಬಂಧಿಸಿದಂತೆ ಸ್ವಾಧೀನಕ್ಕೆ ಒಳಪಡುವ ಪ್ರದೇಶದ ಎರಡು ಸ್ಥಳೀಯ ದಿನಪತ್ರಿಕೆಗಳಲ್ಲಿ ಪ್ರಕಟಣೆ ನೀಡತಕ್ಕದ್ದು. ಇವುಗಳಲ್ಲಿ ಕನಿಷ್ಠ ಒಂದು ದಿನಪತ್ರಿಕೆ ಸ್ವಾಧೀನಕ್ಕೆ ಒಳಪಡುವ ಪ್ರದೇಶಗಳಲ್ಲಿನ ಸ್ಥಳೀಯ ಭಾಷೆಯಲ್ಲಿ ಇರುವ ಪತ್ರಿಕೆಯಾಗಿರತಕ್ಕದ್ದು.

(2) ಅನುಮೋದಿತ ಪರಿಯೋಜನೆಯ ಪ್ರತಿಗಳು, ಸಂಬಂಧಪಟ್ಟ ಪ್ರದೇಶದ ಗ್ರಾಮ ಪಂಚಾಯಿತಿ, ಸಂಬಂಧಪಟ್ಟ ತಹಸೀಲ್ದಾರ್, ಉಪವಿಭಾಗಾಧಿಕಾರಿ ಕಚೇರಿ, ಜಿಲ್ಲಾಧಿಕಾರಿ ಮತ್ತು ಆಡಳಿತಾಧಿಕಾರಿ ಕಚೇರಿಗಳಲ್ಲಿ ಲಭ್ಯವಿರುವಂತೆ ಮಾಡತಕ್ಕದ್ದು. ಇದರ ಪ್ರತಿ ಬೇಕೆಂದು ಕೋರುವವರಿಗೆ ಮಾಹಿತಿ ಹಕ್ಕು ಅಧಿನಿಯಮ, 2005ರ ಮೇರೆಗೆ ದಸ್ತಾವೇಜುಗಳನ್ನು ನೀಡುವುದಕ್ಕಾಗಿ ವಿಧಿಸುವ ಶುಲ್ಕಗಳನ್ನು ವಿಧಿಸುವ ಮೂಲಕ ಪ್ರತಿ ನೀಡತಕ್ಕದ್ದು.

**25. ಜಿಲ್ಲಾಧಿಕಾರಿ ಘೋಷಣೆ ಪ್ರಕಟಿಸುವುದು.–** (1) ಜಿಲ್ಲಾಧಿಕಾರಿಯು, ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿ ಭೂ ಸ್ವಾಧೀನದ ಸಂಪೂರ್ಣ ವೆಚ್ಚವನ್ನು ಠೇವಣಿ ಇರಿಸಿದ ನಂತರ 19ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಪರಿಯೋಜನೆಯ ಸಾರಾಂಶದ ಸಹಿತ ಘೋಷಣೆ ಹೊರಡಿಸತಕ್ಕದ್ದು. ಅಂಥ ಘೋಷಣೆಯನ್ನು, ಗ್ರಾಮ ಪಂಚಾಯಿತಿ ಕಚೇರಿ ಮತ್ತು ಗ್ರಾಮ ಲೆಕ್ಕಿಗ ಹಾಗೂ ನಗರ ಸ್ಥಳೀಯ ಸಂಸ್ಥೆಗಳ ಕಚೇರಿಯಲ್ಲಿ ಘೋಷಣೆಯ ಲಿಖಿತ ಪ್ರತಿಯನ್ನು ಅಂಟಿಸುವ ಮೂಲಕ ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಪ್ರಕಟಿಸತಕ್ಕದ್ದು. ಅಂಥ ಪ್ರಕಟಣೆಗಳನ್ನು ಹೊರಡಿಸುವುದಕ್ಕೆ ಸಂಬಂಧಿಸಿದ ಕೊನೆ ದಿನಾಂಕವು, 19ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಘೋಷಣೆ ಪ್ರಕಟಿಸುವ ದಿನಾಂಕ ಆಗಿರತಕ್ಕದ್ದು.

(2) ಜಮೀನು, ಮರಗಿಡಗಳು, ನಿರ್ಮಿತಿಗಳು ಮೊದಲಾದವುಗಳ ಮೌಲ್ಯವನ್ನು ಪ್ರಾಥಮಿಕ ಅಧಿಸೂಚನೆ ಹೊರಡಿಸಿದ ದಿನಾಂಕದಂದು ನಿರ್ಧರಿಸತಕ್ಕದ್ದು ಮತ್ತು ಸ್ವಾಧೀನದ ಒಟ್ಟು ವೆಚ್ಚವನ್ನು ಸ್ವಾಧೀನಪಡಿಸಿಕೊಡುವಂತೆ ಭೂಮಿ ಅಗತ್ಯವಿರುವ ಸಂಸ್ಥೆ/ವ್ಯಕ್ತಿ ಸಂಬಂಧಪಟ್ಟ ಜಿಲ್ಲಾಧಿಕಾರಿಯ ಬಳಿ ಠೇವಣಿ ಇಡತಕ್ಕದ್ದು.

**26. ಪರಿಹಾರ ಧನ ಅಥವಾ ಉದ್ಯೋಗದ ಆಯ್ಕೆ.–** (1) ರಾಜ್ಯ ಸರ್ಕಾರಿ ಇಲಾಖೆ, ಸಾರ್ವಜನಿಕ ವಲಯ ಉದ್ಯಮಗಳು, ಸ್ಥಳೀಯ ಸ್ವಾಯತ್ತ ಸಂಸ್ಥೆಗಳು, ಸರ್ಕಾರಿ ಅನುದಾನಿತ ಸಂಸ್ಥೆಗಳ ಸ್ಥಾಪನೆ ಮೇರೆಗಿನ ಎಲ್ಲಾ ಸಮೂಹ ಸಿ ಮತ್ತು ಸಮೂಹ ಡಿ ಪ್ರವರ್ಗದ ಸೇವೆಗಳಲ್ಲಿ ಸರ್ಕಾರ ಅರ್ಹ ಯೋಜನಾ ಸಂತ್ರಸ್ತ ವ್ಯಕ್ತಿಗಳ ಉದ್ಯೋಗಕ್ಕಾಗಿ ಅಧಿಸೂಚಿಸುವಷ್ಟು ಮೀಸಲಾತಿ ಕೋಟಾ ಇರತಕ್ಕದ್ದು.

(2) ಸರ್ಕಾರ ಸಮಾನ ಪ್ರಮಾಣದಲ್ಲಿ ಷೇರು ವಂತಿಗೆ ಹೊಂದುವ ಮೂಲಕ ನೆರವು ನೀಡಿರುವ ಸಹಕಾರ ಸಂಘಗಳು, ಕಂಪನಿಗಳು, ಕಾರ್ಖಾನೆಗಳು, ಸಕ್ಕರೆ ಕಾರ್ಖಾನೆಗಳು, ಜವಳಿ ಗಿರಣಿಗಳು, ಸಮೂಹ ಸಿ ಅಥವಾ ಸಮೂಹ ಡಿ ಸೇವೆಗಳು ಅಥವಾ ತತ್ಸಮಾನವಾದ ತಾಂತ್ರಿಕೇತರ ಅಥವಾ ತಾಂತ್ರಿಕ ಹುದ್ದೆಗಳ ವೃಂದ ಸಂಖ್ಯಾಬಲದಲ್ಲಿ ಅರ್ಹ ಯೋಜನಾ ಸಂತ್ರಸ್ತ ವ್ಯಕ್ತಿಗಳಿಗೆ ಉದ್ಯೋಗ ನೀಡತಕ್ಕದ್ದು.

(3) ಯೋಜನಾ ಸಂತ್ರಸ್ತ ವ್ಯಕ್ತಿಗಳ ಪ್ರಮಾಣಪತ್ರ ಹೊಂದಿರುವ ಅಭ್ಯರ್ಥಿಯ ನೇಮಕಾತಿಯನ್ನು ನೇಮಕಾತಿ ಪ್ರಾಧಿಕಾರ ಜಾಹಿರಾತು ನೀಡುವ ಮೂಲಕ ಸಮೂಹ ಸಿ ಮತ್ತು ಸಮೂಹ ಡಿ ಖಾಲಿ ಹುದ್ದೆಗಳಿಗೆ ಮಾಡತಕ್ಕದ್ದು. ನೇಮಕಾತಿಗಳು, ಸದರಿ ಹುದ್ದೆಗಳ ನೇಮಕಾತಿ ನಿಯಮಗಳಿಗನುಸಾರವಾಗಿ ಅಭ್ಯರ್ಥಿ ಹೊಂದಿರಬೇಕಾದ ಅರ್ಹತೆಯನ್ನು ಪರಿಶೀಲಿಸಿದ ನಂತರ ಮತ್ತು ಕಡ್ಡಾಯವಾಗಿ ಮೆರಿಟ್ ಹಾಗೂ ಮೀಸಲಾತಿ ಮೇಲೆ ಮಾಡತಕ್ಕದ್ದು.

(4) ಯೋಜನಾ ಸಂತ್ರಸ್ತ ವ್ಯಕ್ತಿಯನ್ನು ನೇಮಕ ಮಾಡಿಕೊಂಡಾಗ ಆತನ ಯೋಜನಾ ಸಂತ್ರಸ್ತ ವ್ಯಕ್ತಿಯ ಮೂಲ ಪ್ರಮಾಣಪತ್ರವನ್ನು ಅದನ್ನು ನೀಡುರುವ ಪ್ರಾಧಿಕಾರಕ್ಕೆ ಸ್ಥಿರೀಕರಣಕ್ಕಾಗಿ ಕಳುಹಿಸತಕ್ಕದ್ದು. ಅಂಥ ವ್ಯಕ್ತಿಯ ನೇಮಕಾತಿಯನ್ನು ಪ್ರಮಾಣಪತ್ರ ನೀಡಿಕೆ ಪ್ರಾಧಿಕಾರದಿಂದ ಸ್ಥಿರೀಕರಣ ಪತ್ರ ಬಂದ ನಂತರ ಮಾತ್ರವೇ ಖಾಯಂಪಡಿಸತಕ್ಕದ್ದು. ನೀಡಿಕೆ ಪ್ರಾಧಿಕಾರ ರಿಜಿಸ್ಟರಿನಲ್ಲಿ ಟಿಪ್ಪಣಿ ಬರೆಯತಕ್ಕದ್ದು ಮತ್ತು ಪ್ರಮಾಣಪತ್ರವನ್ನು ಪರಿಶೀಲಿಸಲಾಯಿತು ಮತ್ತು ಅದು ಸಿಂಧುವಾಗಿದೆ ಎಂದು ತಿಳಿಸತಕ್ಕದ್ದು ಹಾಗೂ ಮೂಲ ಪ್ರಮಾಣಪತ್ರದ ಮೇಲೆ "ರದ್ದುಗೊಳಿಸಲಾಗಿದೆ" ಎಂದು ಮೊಹರು ಹಾಕಿ ಅದನ್ನು ಆ ಪ್ರಾಧಿಕಾರವೇ ಇಟ್ಟುಕೊಳ್ಳತಕ್ಕದ್ದು.

(5) ಭೂಮಿ ಅಗತ್ಯವಿರುವ ಸಂಸ್ಥೆ/ವ್ಯಕ್ತಿ, ಸಂತ್ರಸ್ತರು, ಸ್ವಯಂ ಉದ್ಯೋಗ ಗಳಿಸಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಉದ್ಯಮಶೀಲತೆ, ತಾಂತ್ರಿಕ ಮತ್ತು ವೃತ್ತಿಪರ ಕೌಶಲ್ಯಗಳನ್ನು ರೂಢಿಸಿಕೊಳ್ಳುವುದಕ್ಕಾಗಿ ತರಬೇತಿ ಸೌಲಭ್ಯಗಳನ್ನು ವ್ಯವಸ್ಥೆಗೊಳಿಸತಕ್ಕದ್ದು.

(6) ಯೋಜನೆ ಮೂಲಕ ಹುದ್ದೆಗಳನ್ನು ಸೃಜಿಸದಿದ್ದರೆ ಅಥವಾ ಮೇಲೆ ಹೇಳಿದಂತೆ ಉದ್ಯೋಗದ ಪ್ರಯೋಜನವನ್ನು ಕ್ಲೇಮು ಮಾಡದಿದ್ದರೆ, ಆಗ ಪ್ರತಿ ಸಂತ್ರಸ್ತ ಕುಟುಂಬಕ್ಕೆ ಒಂದೇ ಬಾರಿಗೆ ಐದು ಲಕ್ಷ ರೂಪಾಯಿಗಳನ್ನು ಸಂದಾಯಿಸುವ ಆಯ್ಕೆಯನ್ನು ಯೋಜನಾ ಸಂತ್ರಸ್ತ ಕುಟುಂಬಗಳಿಗೆ ನೀಡತಕ್ಕದ್ದು.

**27. ಜಿಲ್ಲಾಧಿಕಾರಿ ಅಥವಾ ಒಬ್ಬ ಪ್ರಾಧೀಕರಿಸಲ್ಪಟ್ಟಿರುವ ಅಧಿಕಾರಿ ಐತೀರ್ಪು ನೀಡುವುದು.– (1)** ಜಿಲ್ಲಾಧಿಕಾರಿಯು, ಅಧಿನಿಯಮದ ಅನುಸೂಚಿ 2ರ ಅನುಸಾರ ಪ್ರತಿಯೊಂದು ಸಂತ್ರಸ್ತ ಕುಟುಂಬಕ್ಕೆ ಸಂಬಂಧಿಸಿದಂತೆ ಐತೀರ್ಪು ನೀಡತಕ್ಕದ್ದು ಮತ್ತು ಪ್ರತಿಯೊಂದು ಸಂತ್ರಸ್ತ ಕುಟುಂಬದ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಗೆ ಸಂಬಂಧಿಸಿದಂತೆ ಕುಟುಂಬವಾರು ಐತೀರ್ಪುಗಳನ್ನು ಅವುಗಳಿಗೆ ನೀಡತಕ್ಕದ್ದು.

(2) ಜಿಲ್ಲಾಧಿಕಾರಿ ಅಥವಾ ಒಬ್ಬ ಪ್ರಾಧೀಕರಿಸಲ್ಪಟ್ಟಿರುವ ಅಧಿಕಾರಿ ಸಹ ಪ್ರತಿಯೊಂದು ಪುನರ್ವ್ಯವಸ್ಥೆ ಪ್ರದೇಶಕ್ಕೆ ಸಂಬಂಧಿಸಿದಂತೆ ಒದಗಿಸಬೇಕಿರುವ ಮೂಲಸೌಕರ್ಯಗಳ ಏರ್ಪಾಟಿಗೆ ಸಂಬಂಧಿಸಿದ ಆದೇಶಗಳನ್ನು ನೀಡತಕ್ಕದ್ದು.

(3) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕಮೀಷನರ್ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಪರಿಯೋಜನೆಯ ಅನುಷ್ಠಾನವನ್ನು ನಿಕಟವಾಗಿ ಮೇಲ್ವಿಚಾರಣೆ ಮಾಡತಕ್ಕದ್ದು.

(4) ಅಧಿನಿಯಮದ 11ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಪ್ರಾಥಮಿಕ ಅಧಿಸೂಚನೆ ಹೊರಡಿಸಿದಾಗ ಯೋಜನಾ ಸಂತ್ರಸ್ತ ಕುಟುಂಬಗಳು ಮಾತ್ರ ಅಧಿನಿಯಮದ ಎರಡನೇ ಮತ್ತು ಮೂರನೇ ಅನುಸೂಚಿ ಪ್ರಕಾರ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಮೂಲಾಂಶಗಳನ್ನು ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

(5) ನಗರೀಕರಣದ ಉದ್ದೇಶಕ್ಕಾಗಿ ಜಮೀನನ್ನು ಸ್ವಾಧೀನಪಡಿಸಿಕೊಂಡಾಗ ಅಭಿವೃದ್ಧಿಪಡಿಸಿದ ಶೇಕಡಾ ಇಪ್ಪತ್ತರಷ್ಟು ಜಮೀನನ್ನು ಕೊಡುವ ಸಂದರ್ಭದಲ್ಲಿ, ಮೂಲಸೌಕರ್ಯ ಸೌಲಭ್ಯಗಳ ಘಟಕಾಂಶಗಳಿಗಾಗಿ ಬಳಸಿರುವ ಜಮೀನನ್ನು ಅಭಿವೃದ್ಧಿಪಡಿಸಿದ ಶೇಕಡಾ ಇಪ್ಪತ್ತರಷ್ಟು ಜಮೀನನ್ನು ಲೆಕ್ಕಹಾಕುವುದಕ್ಕಾಗಿ ಪರಿಗಣಿಸತಕ್ಕದ್ದಲ್ಲ.

(6) ಭೂಮಿ ಅಗತ್ಯವಿರುವ ಸಂಸ್ಥೆ/ವ್ಯಕ್ತಿಯ ಪರವಾಗಿ ಭೂ ಸ್ವಾಧೀನಪಡಿಸಿಕೊಳ್ಳುವುದನ್ನು ಒಳಗೊಂಡಿರುವ ಯೋಜನೆಯ ಪ್ರಕರಣದಲ್ಲಿ, ಆ ಯೋಜನೆಯ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳ ಕುಟುಂಬಗಳನ್ನು ನಿರುದ್ದೇಶಕವಾಗಿ ಸಂತ್ರಸ್ತಗೊಳಿಸುವುದರಿಂದ ಕೂಡಿದ್ದರೆ ಆಗ ರಾಜ್ಯ ಸರ್ಕಾರ, ರಾಜ್ಯದ ಸಂಬಂಧಪಟ್ಟ ಸಮಾಜ ಕಲ್ಯಾಣ ಇಲಾಖೆ ಮತ್ತು ಆ ಪ್ರದೇಶದಲ್ಲಿರುವ ಗ್ರಾಮ ಪಂಚಾಯಿತಿಗಳು ಅಥವಾ ನಗರ ಸ್ಥಳೀಯ

ಸಂಸ್ಥೆಗಳೊಂದಿಗೆ ಸಮಾಲೋಚಿಸಿ ಒಂದು ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸತಕ್ಕದ್ದು. ಸದರಿ ಯೋಜನೆಗೆ, ಗ್ರಾಮ ಸಭೆ ಅಥವಾ ಪಂಚಾಯಿತಿ ಅಥವಾ ನಗರ ಸ್ಥಳೀಯ ಸಂಸ್ಥೆಗಳಿಂದ ಪೂರ್ವಾನುಮತಿ ಪಡೆದುಕೊಳ್ಳುವ ಸಮಯದಲ್ಲಿ ಅವುಗಳ ಮುಂದೆ ಅದನ್ನು ಓದಿ ಹೇಳಬೇಕು ಮತ್ತು ಚರ್ಚಿಸಬೇಕು.

(7) ಜಿಲ್ಲಾಧಿಕಾರಿಯು, 21ನೇ ಪ್ರಕರಣದ ಅನುಸಾರ ಸ್ವಾಧೀನಪಡಿಸಿಕೊಳ್ಳಬೇಕಿರುವ ಜಮೀನಿನ ಸಂಬಂಧದಲ್ಲಿ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳು ತಮ್ಮ ಕ್ಲೇಮುಗಳನ್ನು ಸಲ್ಲಿಸುವಂತೆ ಕೋರುವಾಗ, ಭೂಮಿ ಅಗತ್ಯವಿರುವ ಸಂಸ್ಥೆ/ವ್ಯಕ್ತಿಗೆ ಸಹ ಈ ಕುರಿತು ನೋಟೀಸು ನೀಡತಕ್ಕದ್ದು. ಭೂಮಿ ಅಗತ್ಯವಿರುವ ಸಂಸ್ಥೆ/ವ್ಯಕ್ತಿಯು ಜಿಲ್ಲಾಧಿಕಾರಿಯೊಂದಿಗೆ, ಸ್ವಾಧೀನಪಡಿಸಿಕೊಳ್ಳಬೇಕಿರುವ ಜಮೀನಿನ ಮಾರುಕಟ್ಟೆ ಮೌಲ್ಯವೂ ಸೇರಿದಂತೆ ಸ್ವಾಧೀನಪಡಿಸಿಕೊಳ್ಳಬೇಕಿರುವ ಜಮೀನಿಗೆ ನೀಡುವ ಪರಿಹಾರದ ಮೊತ್ತವನ್ನು ಕುರಿತು ತನ್ನ ಅಭಿಪ್ರಾಯವನ್ನು ಹೇಳಬೇಕು.

(8) ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಪ್ರಯೋಜನಗಳೂ ಸೇರಿದಂತೆ ಐತೀರ್ಪಿನ ಪರಿಹಾರದ ಮೊತ್ತವು ಐದು ಕೋಟಿ ರೂಪಾಯಿಗಳಿಗಿಂತ ಕಡಿಮೆಯಿದ್ದರೆ ಆಗ ಜಿಲ್ಲಾಧಿಕಾರಿ ಐತೀರ್ಪನ್ನು ಘೋಷಿಸತಕ್ಕದ್ದು.

(9) ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಪ್ರಯೋಜನಗಳೂ ಸೇರಿದಂತೆ ಐತೀರ್ಪಿನ ಪರಿಹಾರ ಮೊತ್ತವು ಐದು ಕೋಟಿ ರೂಪಾಯಿಗಳಿಗಿಂತ ಹೆಚ್ಚಾಗಿದ್ದು ಮತ್ತು ಹತ್ತು ಕೋಟಿ ರೂಪಾಯಿಗಳಿಗಿಂತ ಕಡಿಮೆಯಿದ್ದರೆ, ಆಗ ಜಿಲ್ಲಾಧಿಕಾರಿ ಸಂಬಂಧಪಟ್ಟ ಕಂದಾಯ ವಿಭಾಗದ ಪ್ರಾದೇಶಿಕ ಆಯುಕ್ತರಿಂದ ಪೂರ್ವಾನುಮೋದನೆ ಪಡೆದುಕೊಂಡು ಐತೀರ್ಪನ್ನು ಘೋಷಿಸತಕ್ಕದ್ದು.

(10) ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಪ್ರಯೋಜನಗಳೂ ಸೇರಿದಂತೆ ಐತೀರ್ಪಿನ ಪರಿಹಾರ ಮೊತ್ತವು ಹತ್ತು ಕೋಟಿ ರೂಪಾಯಿಗಳಿಗಿಂತ ಹೆಚ್ಚಾಗಿದ್ದರೆ, ಆಗ ಜಿಲ್ಲಾಧಿಕಾರಿ ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದುಕೊಂಡ ನಂತರ ಐತೀರ್ಪನ್ನು ಘೋಷಿಸತಕ್ಕದ್ದು.

(11) ಜಿಲ್ಲಾಧಿಕಾರಿಯು, ಐತೀರ್ಪನ್ನು ತಿದ್ದುಪಡಿ ಮಾಡಿದ ಕಾರಣದಿಂದ ಭೂ ಮಾಲೀಕರಿಗೆ ಸಂದಾಯ ಮಾಡಿರುವ ಯಾವುದೇ ಹೆಚ್ಚಿನ ಮೊತ್ತವನ್ನು, ಅಂಥ ಎಲ್ಲಾ ವ್ಯಕ್ತಿಗಳಿಗೂ ಯುಕ್ತವಾದ ನೋಟೀಸು ನೀಡಿದ ನಂತರ ವಸೂಲು ಮಾಡತಕ್ಕದ್ದು ಮತ್ತು ಅದನ್ನು ಸಂದಾಯ ಮಾಡುವುದಕ್ಕೆ ಸಂಬಂಧಿಸಿದಂತೆ ಆಗುವ ಯಾವುದೇ ವಿಫಲತೆ ಅಥವಾ ನಿರಾಕರಣೆಗೆ ಹಾಗೆ ಮಾಡಿದವನ ವಿರುದ್ಧ ದಂಡನಾಕ್ರಮವನ್ನು ಹೂಡುವುದರ ಜೊತೆಯಲ್ಲಿ ಆ ಮೊತ್ತವನ್ನು ಭೂ ಕಂದಾಯದ ಬಾಕಿಗಳ ರೂಪದಲ್ಲಿ ವಸೂಲು ಮಾಡಬಹುದಾಗಿದೆ.

**28. ಮಾರುಕಟ್ಟೆ ಮೌಲ್ಯವನ್ನು ಲೆಕ್ಕಹಾಕುವುದು.–** (1) ಸ್ವಾಧೀನಪಡಿಸಿಕೊಳ್ಳಬೇಕಿರುವ ಜಮೀನು ಪುರಸಭಾ ಪ್ರದೇಶದ ಪರಿಮಿತಿಗಳೊಳಗೆ ಇದ್ದರೆ, ಅಧಿನಿಯಮದ 26ನೇ ಪ್ರಕರಣದ (1)ನೇ ಉಪಪ್ರಕರಣದ ಅನುಸಾರ ಲೆಕ್ಕಹಾಕಬೇಕಿರುವ ಮಾರುಕಟ್ಟೆ ಮೌಲ್ಯವು ಈ ಮುಂದಿನಂತೆ ಇರತಕ್ಕದ್ದು:

ಎ. ಪುರಸಭೆ, ನಗರಸಭೆ, ನಗರಪಾಲಿಕೆ ಪ್ರದೇಶಗಳಿಗೆ ಸಂಬಂಧಿಸಿದಂತೆ **1(ಒಂದಕ್ಕೆ) ಸಮಾನವಾಗಿರುವ** ಅಪವರ್ತನದಿಂದ (ಫ್ಯಾಕ್ಟರ್) ಗುಣಿಸತಕ್ಕದ್ದು ಮತ್ತು

ಬಿ. ಅಂಥ ಪುರಸಭೆ ಪ್ರದೇಶಗಳ ಪರಿಮಿತಿಯಿಂದ ಆಚೆಗೆ ಇದ್ದು ಮತ್ತು ಅಲ್ಲಿಂದ 5 ಕಿ.ಮೀ. ದೂರದವರೆಗೆ ವ್ಯಾಪಿಸಿರುವ ಪ್ರದೇಶಗಳಲ್ಲಿರುವ ಸ್ವಾಧೀನಪಡಿಸಿಕೊಳ್ಳಬೇಕಿರುವ ಜಮೀನುಗಳ ಯೋಜನಾ ಪ್ರದೇಶಕ್ಕೆ ಸಂಬಂಧಿಸಿದಂತೆ **1.5ಕ್ಕೆ (ಒಂದೂವರೆ) ಸಮಾನವಾಗಿರುವ** ಅಪವರ್ತನದಿಂದ (ಫ್ಯಾಕ್ಟರ್) ಗುಣಿಸತಕ್ಕದ್ದು. ಮತ್ತು

ಸಿ. (ಎ) ಮತ್ತು (ಬಿ) ನಲ್ಲಿ ಹೇಳಿರುವ ಪ್ರದೇಶಗಳನ್ನು ಹೊರತುಪಡಿಸಿದ ಪ್ರದೇಶಗಳಲ್ಲಿರುವ ಸ್ವಾಧೀನಪಡಿಸಿಕೊಳ್ಳಬೇಕಿರುವ ಜಮೀನುಗಳ ಯೋಜನಾ ಪ್ರದೇಶಕ್ಕೆ ಸಂಬಂಧಿಸಿದಂತೆ **2ಕ್ಕೆ (ಎರಡು) ಸಮಾನವಾದ** ಅಪವರ್ತನದಿಂದ (ಫ್ಯಾಕ್ಟರ್) ಗುಣಿಸತಕ್ಕದ್ದು.

(2) ಜಿಲ್ಲಾಧಿಕಾರಿಯು, ಅಧಿನಿಯಮದ 28ನೇ ಪ್ರಕರಣದ ಮೇರೆಗೆ ಅಗತ್ಯಪಡಿಸಿರುವಂತೆ ಪರಿಹಾರ ಮೊತ್ತವನ್ನು ನಿರ್ಧರಿಸುವಾಗ, ನ್ಯಾಯದ ಹಿತದೃಷ್ಟಿಯಿಂದ ಅತ್ಯುತ್ತಮವಾಗಿರುವ, ಸಂತ್ರಸ್ತ ಕುಟುಂಬಗಳಿಗೆ ನ್ಯಾಯ ಮತ್ತು ಪ್ರಯೋಜನ ಕಲ್ಪಿಸುವ ಹಾಗೂ ಭೂಮಿ ಅಗತ್ಯವಿರುವ ಸಂಸ್ಥೆ/ವ್ಯಕ್ತಿಗೆ ಒಪ್ಪಿಗೆಯಾಗುವಂಥ ಯಾವುದೇ ಇನ್ನಿತರ ಮಾನದಂಡವನ್ನು ಸಹ ಪರಿಗಣಿಸಬಹುದು.

**29. ನಿರ್ದಿಷ್ಟಪಡಿಸಿರುವ ವ್ಯಕ್ತಿಯ ಹೊರತಾಗಿ ಬೇರೆ ವ್ಯಕ್ತಿ ಖರೀದಿಗಳನ್ನು ಮಾಡುವುದು.–** (1) ಪುನರ್ವಸತಿ ಮತ್ತು ಪುನರ್ವ್ಯವಸ್ಥೆಗೆ ಸಂಬಂಧಿಸಿದ ಅಧಿನಿಯಮದ 46ನೇ ಪ್ರಕರಣದ ಉಪಬಂಧಗಳು 'ನಿರ್ದಿಷ್ಟಪಡಿಸಿರುವ ವ್ಯಕ್ತಿಯ ಹೊರತಾಗಿ' ಯಾರೇ ವ್ಯಕ್ತಿ ಭೂಮಾಲೀಕರೊಂದಿಗೆ ಖಾಸಗಿ ಮಾತುಕತೆಗಳ ಮೂಲಕ

ಎ. ಕೈಗಾರಿಕಾ ಉದ್ದೇಶಕ್ಕಾಗಿ **500** ಎಕರೆಗಳಿಗಿಂತ ಹೆಚ್ಚು ವಿಸ್ತೀರ್ಣದ ಖುಷ್ಕಿ ಜಮೀನು ಮತ್ತು/ ಅಥವಾ **50** ಎಕರೆಗಳಿಗಿಂತ ಹೆಚ್ಚು ವಿಸ್ತೀರ್ಣದ ತರಿ ಜಮೀನನ್ನು ಮತ್ತು

ಬಿ. ವಸತಿ, ಶಿಕ್ಷಣದ ಉದ್ದೇಶಗಳು ಹಾಗೂ ಯಾವುದೇ ಇತರ ಉದ್ದೇಶಗಳಿಗಾಗಿ **100** ಎಕರೆಗಳಿಗಿಂತ ಹೆಚ್ಚು ವಿಸ್ತೀರ್ಣದ ಖುಷ್ಕಿ ಜಮೀನನ್ನು

– ಖರೀದಿ ಮಾಡಿದರೆ ಗ್ರಾಮೀಣ ಪ್ರದೇಶಗಳು ಅಥವಾ ನಗರ ಪ್ರದೇಶಗಳಿಗೆ ಅನ್ವಯಿಸತಕ್ಕದ್ದು.

**30. ಮಿಶ್ರ ಬೆಳೆಯ ತರಿ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆ ಪರಿಮಿತಿಗಳು.–** (1) ಮಿಶ್ರ ಬೆಳೆಯ ತರಿ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವುದು ಒಟ್ಟಾರೆಯಾಗಿ ಎಲ್ಲಾ ಯೋಜನೆಗಳಿಗೆ ಸಂಬಂಧಿಸಿದಂತೆ ರಾಜ್ಯದ ಒಟ್ಟು ಮಿಶ್ರ ಬೆಳೆಯ ತರಿ ಜಮೀನಿನ ಶೇಕಡಾ 5ರಷ್ಟು ಮತ್ತು ಪ್ರತಿಯೊಂದು ಜಿಲ್ಲೆಯ ಒಟ್ಟು ಮಿಶ್ರ ಬೆಳೆಯ ತರಿ ಜಮೀನಿನ ಶೇ.1ರಷ್ಟು ಪ್ರಮಾಣಕ್ಕಿಂತ ಹೆಚ್ಚಾಗತಕ್ಕದ್ದಲ್ಲ. ಜಮೀನಿನ ಪ್ರಮಾಣದ ಈ ಪರಿಮಿತಿಯನ್ನು, ರಾಜ್ಯ ಸರ್ಕಾರ ಪ್ರತಿ ಮೂರು ವರ್ಷಕ್ಕೊಮ್ಮೆ ರಚಿಸುವ ಕೃಷಿ ಕ್ಷೇತ್ರ, ರೈತರು ಮತ್ತು ಕೈಗಾರಿಕಾ ಕ್ಷೇತ್ರದ ಪ್ರತಿನಿಧಿಗಳನ್ನು ಒಳಗೊಂಡಿರುವ ತಜ್ಞರ ಗುಂಪು ನೀಡುವ ಶಿಫಾರಸುಗಳನ್ನು ಆಧರಿಸಿ ಪರಿಷ್ಕರಿಸಬೇಕಿದೆ.

**31. ಪ್ರಾಜೆಕ್ಟ್ ಮಟ್ಟದಲ್ಲಿ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಸಮಿತಿ ರಚಿಸುವುದು.–** (1) ರಾಜ್ಯ ಸರ್ಕಾರ, ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಪರಿಯೋಜನೆಯ ಅನುಷ್ಠಾನದ ಪ್ರಗತಿಯ ಮೇಲ್ವಿಚಾರಣೆ ಮತ್ತು ಪರಿಶೀಲನೆ ಮಾಡುವುದಕ್ಕೆ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಮಸಭೆ ಮತ್ತು ನಗರ ಪ್ರದೇಶಗಳಲ್ಲಿ ಪುರಸಭೆಯೊಂದಿಗೆ ಸಮಾಲೋಚಿಸಿ ಅನುಷ್ಠಾನೋತ್ತರ ಸಾಮಾಜಿಕ ಲೆಕ್ಕಪರಿಶೋಧನೆಯನ್ನು ಕೈಗೊಳ್ಳುವುದಕ್ಕೆ ಪ್ರಾಜೆಕ್ಟ್ ಮಟ್ಟದಲ್ಲಿ ಒಂದು ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಸಮಿತಿ ರಚಿಸತಕ್ಕದ್ದು.

**32. ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಸದಸ್ಯರಿಗೆ ಪ್ರಯಾಣ ಭತ್ಯೆ ನೀಡುವ ಮತ್ತು ಸಂದಾಯ ಮಾಡುವ ವಿಧಾನ.–** (1) ಸಮಿತಿಗಳು, ಆಡಳಿತಾಧಿಕಾರಿಯು ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕರಡು ಪರಿಯೋಜನೆ ಸಿದ್ಧಪಡಿಸಿದಾಗ ತಮ್ಮ ಮೊದಲನೆ ಸಭೆಯನ್ನು ನಡೆಸತಕ್ಕದ್ದು. ಸಮಿತಿಯು, ಪರಿಯೋಜನೆ ಕುರಿತು ಚರ್ಚಿಸತಕ್ಕದ್ದು ಮತ್ತು ಸಲಹೆಗಳು ಹಾಗೂ ಶಿಫಾರಸುಗಳನ್ನು ನೀಡತಕ್ಕದ್ದು. ಆನಂತರ, ಪುನರ್ವಸತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೂ ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು ಹಾಗೂ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಪ್ರಕ್ರಿಯೆಯು ಪ್ರಗತಿ ಕುರಿತು ಚರ್ಚಿಸತಕ್ಕದ್ದು.

(2) ಸಾಮಾಜಿಕ ಲೆಕ್ಕಪರಿಶೋಧನೆಗಳ ಅನುಷ್ಠಾನೋತ್ತರದ ಪ್ರಗತಿ ಕುರಿತು ಚರ್ಚಿಸುವುದಕ್ಕಾಗಿ ಸಮಿತಿಯು ಮೂರು ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು.

(3) ಸಮಿತಿಯ ಸದಸ್ಯರು, ರಾಜ್ಯ ಸರ್ಕಾರ ಸಮೂಹ–ಎ ಪ್ರವರ್ಗದ ಸರ್ಕಾರಿ ನೌಕರರಿಗೆ ಕಾಲಕಾಲಕ್ಕೆ ನಿಗದಿಪಡಿಸುವ ದರದಲ್ಲಿ ಪ್ರಯಾಣಭತ್ಯೆ ಪಡೆಯತಕ್ಕದ್ದು.

(4) ಸಮಿತಿಗೆ ಸೂಕ್ತವೆನಿಸಿದರೆ ಅದು, ಸ್ವಾಧೀನಕ್ಕೆ ಒಳಪಡುವ ಪ್ರದೇಶಕ್ಕೆ ಭೇಟಿ ನೀಡುವುದು ಮತ್ತು ಸಂತ್ರಸ್ತ ಕುಟುಂಬಗಳೊಂದಿಗೆ ಚರ್ಚಿಸಬಹುದು ಮತ್ತು ಪುನರ್ವಸತಿ ಪ್ರಕ್ರಿಯೆಯ ಮೇಲ್ವಿಚಾರಣೆ ಮಾಡುವುದಕ್ಕಾಗಿ ಪುನರ್ವಸತಿ ಪ್ರದೇಶಗಳಿಗೆ ಕ್ಷೇತ್ರ ಭೇಟಿ ನೀಡಬಹುದು.

**33. ರಾಜ್ಯ ಮೇಲ್ವಿಚಾರಣಾ ಸಮಿತಿಯ ಕಾರ್ಯವಿಧಾನ.–** (1) ರಾಜ್ಯ ಮೇಲ್ವಿಚಾರಣಾ ಸಮಿತಿಗೆ ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿ ಅಧ್ಯಕ್ಷರಾಗಿರತಕ್ಕದ್ದು ಮತ್ತು ಭೂಮಿ ಅಗತ್ಯ ಇರುವ ಎಲ್ಲಾ ಸಂಸ್ಥೆ/ವ್ಯಕ್ತಿಗಳ ಇಲಾಖಾ ಮುಖ್ಯಸ್ಥರು ಹಾಗೂ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕ್ಷೇತ್ರದ ತಜ್ಞರ ಪ್ರತಿನಿಧಿಗಳು ಸದಸ್ಯರಾಗಿರತಕ್ಕದ್ದು.

(2) ರಾಜ್ಯ ಮೇಲ್ವಿಚಾರಣಾ ಸಮಿತಿಯು, 18ನೇ ಪ್ರಕರಣದ ಮೇರೆಗೆ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕಮೀಷನರ್ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಅನುಮೋದಿತ ಪರಿಯೋಜನೆಯನ್ನು ಪ್ರಕಟಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಪರಿಯೋಜನೆಯ ಅನುಷ್ಠಾನದ ಪರಿಶೀಲನೆ ಮತ್ತು ಮೇಲ್ವಿಚಾರಣೆ ಮಾಡುವುದಕ್ಕೆ ಸಂಬಂಧಿಸಿದಂತೆ ತನ್ನ ಮೊದಲನೆ ಸಭೆ ನಡೆಸತಕ್ಕದ್ದು ಮತ್ತು ಆನಂತರ ನಡೆಯುವ ಸಭೆಗಳಲ್ಲಿ ರಾಜ್ಯ ಮೇಲ್ವಿಚಾರಣಾ ಸಮಿತಿಯ ಸಭೆಯನ್ನು ಆರು ತಿಂಗಳ ನಂತರ ನಡೆಸತಕ್ಕದ್ದು. ಸಮಿತಿ ಅಪೇಕ್ಷಿಸಿದರೆ, ಆಗ ಅದು ಆರು ತಿಂಗಳ ಒಳಗೆ ಸಹ ತನ್ನ ಸಭೆ ನಡೆಸಬಹುದು.

(3) ತಜ್ಞರಿಗೆ ನೀಡುವ ಭತ್ಯೆಗಳು ಪುನರ್ವಸತಿ ಮತ್ತು ಪುನರ್ವ್ಯವಸ್ಥೆಯ ಕಮೀಷನರ್ ಅಥವಾ ಸರ್ಕಾರದ ಕಾರ್ಯದರ್ಶಿಗೆ ಸಂದಾಯ ಮಾಡುವ ಭತ್ಯೆಗಳೇ ಆಗಿರತಕ್ಕದ್ದು.

**34. ಭೂ ಸ್ವಾಧೀನ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಪ್ರಾಧಿಕಾರದ ಸೇವಾ ಷರತ್ತುಗಳು.–** (1) ಸದರಿ ಪ್ರಾಧಿಕಾರಗಳು ರಾಜ್ಯ ಸರ್ಕಾರ ಹೊರಡಿಸಬಹುದಾದ ಅಧಿಸೂಚನೆಗನುಸಾರವಾಗಿ ಪ್ರಕಾರ್ಯ ನಿರ್ವಹಿಸತಕ್ಕದ್ದು.

(2) ಸದರಿ ಪ್ರಾಧಿಕಾರದ ಅಧ್ಯಕ್ಷರನ್ನು ರಾಜ್ಯ ಸರ್ಕಾರ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳೊಂದಿಗೆ ಸಮಾಲೋಚಿಸಿ ಅಧಿಕೃತ ರಾಜ್ಯಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ ನೇಮಕ ಮಾಡತಕ್ಕದ್ದು.

(3) ರಾಜ್ಯದ ಕಂದಾಯ ಇಲಾಖೆಯಿಂದ ತಹಸೀಲ್ದಾರ್ ದರ್ಜೆಯ ಒಬ್ಬ ರಿಜಿಸ್ಟ್ರಾರ್ ಮತ್ತು ರಾಜ್ಯ ಸರ್ಕಾರದ ಕಂದಾಯ ಇಲಾಖೆಯೂ ಸೇರಿದಂತೆ ಸರ್ಕಾರಿ ನೌಕರರ ವಿವಿಧ ವೃಂದಗಳಿಂದ ಪ್ರಥಮ ದರ್ಜೆ ಸಹಾಯಕ ದರ್ಜೆಯಿಂದ ಇಬ್ಬರು ನೌಕರರು, ಒಬ್ಬ ಶೀಘ್ರಲಿಪಿಗಾರ, ನಾಲ್ವರು ಗುಮಾಸ್ತರು, ಒಬ್ಬ ಚಾಲಕ ಮತ್ತು ಮೂವರು ಜವಾನರು ಸೇರಿದಂತೆ ಇತರ ಸಿಬ್ಬಂದಿಯನ್ನು ನೇಮಕ ಮಾಡತಕ್ಕದ್ದು.

(4) ಸದರಿ ಪ್ರಾಧಿಕಾರದ ರಿಜಿಸ್ಟ್ರಾರ್ ಮತ್ತು ಇತರ ಅಧಿಕಾರಿಗಳು ಹಾಗೂ ನೌಕರರ ಸಂಬಳಗಳು ಮತ್ತು ಭತ್ಯೆಗಳು ಅವರು ತಮ್ಮ ಮಾತೃ ಇಲಾಖೆಯಲ್ಲಿ ಪಡೆಯುತ್ತಿದ್ದ ರೀತಿಯಲ್ಲಿಯೇ ಇರತಕ್ಕದ್ದು ಮತ್ತು ಅವರಿಗೆ ಅವರ ಮೂಲ (ಇದರಲ್ಲಿ ಗ್ರೇಡ್ ಪೇ ಸೇರಿದೆ) ವೇತನದ ಶೇ. 10ರಷ್ಟು ಪ್ರತಿನಿಯೋಜನೆ ಭತ್ಯೆ ಸಂದಾಯಿಸತಕ್ಕದ್ದು. ಅವರ ಸೇವಾ ಷರತ್ತುಗಳು, ಅವರಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಗಳ ಮೇರೆಗೆ ಅನ್ವಯಿಸುವ ಷರತ್ತುಗಳೇ ಆಗಿರತಕ್ಕದ್ದು.

(5) ಸದರಿ ಪ್ರಾಧಿಕಾರದ ಅಧ್ಯಕ್ಷರಿಗೆ, ಈ ಮುಂದಿನಂತೆ ಸಂಬಳ ಹಾಗೂ ಇತರ ಭತ್ಯೆಗಳನ್ನು ಸಂದಾಯಿಸತಕ್ಕದ್ದು, ಎಂದರೆ:–

ಎ. ಆತ ಸೇವಾನಿರತ ಜಿಲ್ಲಾ ನ್ಯಾಯಾಧೀಶನಾಗಿದ್ದ ಪಕ್ಷದಲ್ಲಿ – ನ್ಯಾಯಿಕ ವೇತನ ಆಯೋಗದ ಮೇರೆಗೆ ಒಬ್ಬ ಜಿಲ್ಲಾ ನ್ಯಾಯಾಧೀಶರಿಗೆ ನೀಡಲು ಅನುಮತಿಸಿರುವಷ್ಟು.

ಬಿ. ಆತ ಸೇವಾನಿರತನಲ್ಲದ ಜಿಲ್ಲಾ ನ್ಯಾಯಾಧೀಶನಾಗಿದ್ದ ಪಕ್ಷದಲ್ಲಿ – ಸರ್ಕಾರಿ ಸೇವೆಯಲ್ಲಿ ಆತ ಪಡೆದಿದ್ದ ಆತನ ಕೊನೆಯ ಸಂಬಳ ಮತ್ತು ಇದರೊಂದಿಗೆ ಮೂಲ ವೇತನದ (ಇದರಲ್ಲಿ ಗ್ರೇಡ್ ಪೇ ಸೇರಿದೆ) ಶೇಕಡ ಹತ್ತರಷ್ಟು ಪ್ರತಿನಿಯೋಜನೆ ಭತ್ಯೆ.

ಸಿ. ಆತ ಏಳು ವರ್ಷಗಳಿಗಿಂತ ಕಡಿಮೆಯಲ್ಲದ ಅವಧಿಯ ಅರ್ಹ ವೃತ್ತಿನಿರತ ವಕೀಲನಾಗಿದ್ದ ಪಕ್ಷದಲ್ಲಿ – ಹುದ್ದೆಗೆ ಸೇರಿದ ಹಂತದಲ್ಲಿ ಜಿಲ್ಲಾ ನ್ಯಾಯಾಧೀಶರ ವೇತನ ಶ್ರೇಣಿಯಲ್ಲಿ ನೀಡುವ ಸಂಬಳಕ್ಕೆ ಅನುಸಾರವಾಗಿ

ಡಿ. ಅಧ್ಯಕ್ಷರಿಗೆ ಅನ್ವಯಿಸುವ ಸಂಬಂಧಪಟ್ಟ ನಿಯಮಗಳಿಗೆ ಅನುಸಾರವಾಗಿ ಅವರಿಗೆ ನಿವೃತ್ತಿ ವೇತನ, ಉಪದಾನ ಮತ್ತು ಇತರ ನಿವೃತ್ತಿ ಪ್ರಯೋಜನಗಳು ಅನ್ವಯಿಸತಕ್ಕದ್ದು.

**35. ಸುಳ್ಳು ಕ್ಲೇಮು ಮಾಡುವ ಮೂಲಕ ಅಥವಾ ಮೋಸದ ರೂಪದಲ್ಲಿ ಪಡೆದುಕೊಂಡಿರುವ ಪುನರ್ವಸತಿ ಮತ್ತು ಪುನರ್ವ್ಯವಸ್ಥೆ ಪ್ರಯೋಜನಗಳನ್ನು ವಸೂಲು ಮಾಡುವ ವಿಧಾನ.–** ಜಿಲ್ಲಾಧಿಕಾರಿಯು, ಸುಳ್ಳು ಕ್ಲೇಮು ಮಾಡುವ ಮೂಲಕ ಅಥವಾ ಮೋಸದ ರೂಪದಲ್ಲಿ ಪಡೆದುಕೊಂಡಿರುವ ಅಂಥ ಪ್ರಯೋಜನಗಳನ್ನು ಭೂ ಕಂದಾಯದ ಬಾಕಿಗಳ ರೂಪದಲ್ಲಿ ವಸೂಲು ಮಾಡತಕ್ಕದ್ದು.

**36. ಬಳಸದಿರುವ ಜಮೀನನ್ನು ಹಿಂತಿರುಗಿಸುವ ವಿಧಾನ.–** ಜಿಲ್ಲಾಧಿಕಾರಿಯು, ಯಾವ ಉದ್ದೇಶಕ್ಕಾಗಿ ಆ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲಾಗಿತ್ತೋ, ಆ ಉದ್ದೇಶಕ್ಕಾಗಿ ಆ ಜಮೀನನ್ನು ಸ್ವಾಧೀನಪಡಿಸಿಕೊಂಡ ದಿನಾಂಕದಿಂದ ಐದು ವರ್ಷಗಳವರೆಗೆ ಬಳಸದಿರುವ ಅಥವಾ ಉಪಯೋಗಿಸದಿರುವ 'ಬಳಸದಿರುವ ಜಮೀನ'ನ್ನು ಈ ಮುಂದಿನವರಿಗೆ ವಾಪಸ್ಸು ನೀಡತಕ್ಕದ್ದು.

i. ರಾಜ್ಯ ಸರ್ಕಾರದಿಂದ ಪೂರ್ವಾನುಮೋದನೆ ಪಡೆದುಕೊಂಡು ಸಂಬಂಧಪಟ್ಟ ಎಲ್ಲರಿಗೂ ನೋಟೀಸು ನೀಡುವ ಮೂಲಕ, ಈ ಅಧಿನಿಯಮದ ಮೇರೆಗೆ ಆ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವ ಸಮಯದಲ್ಲಿ ನೀಡಿದ್ದ ಪರಿಹಾರ ಅಥವಾ ಹೆಚ್ಚಿನ ಪರಿಹಾರದ ಮೊತ್ತವನ್ನು ಕಳೆದ ನಂತರ ಆ ಜಮೀನಿನ ಈಗಿನ ಮಾರುಕಟ್ಟೆ ಮೌಲ್ಯವನ್ನು ವಸೂಲು ಮಾಡಿಕೊಂಡ ತರುವಾಯ ಸಂದರ್ಭಾನುಸಾರ ಜಮೀನಿನ ನೈಜ ಮಾಲೀಕ ಅಥವಾ ಅವರ ಕಾನೂನುಬದ್ಧ ವಾರಸುದಾರರಿಗೆ, ಅಥವಾ

ii. ಅಂಥ ಜಮೀನನ್ನು ಉತ್ಪಾದಕ ಉಪಯೋಗಕ್ಕೆ ಪರಿವರ್ತಿಸುವುದಕ್ಕೆ ಒತ್ತು ನೀಡುವಂಥ ಸರ್ಕಾರದ ಈಕ್ವಿಟಿಯಾಗಿರುವ ಭೂ ಬ್ಯಾಂಕ್‌ಗೆ

**37. ಪ್ರಕಟಣೆಯ ವಿಧಾನ ಮತ್ತು ರೀತಿ.–** ಅಧಿನಿಯಮದ ಉಪಬಂಧ ಉಪಬಂಧಿಸಿರುವಾಗ, ಈ ಮುಂದಿನ ಒಂದು ಅಥವಾ ಹೆಚ್ಚು ವಿಧಾನದಲ್ಲಿ ಹಾಗೆ ಪ್ರಕಟಿಸತಕ್ಕದ್ದು, ಎಂದರೆ:–

i) ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು.

ii) ಸ್ವಾಧೀನಕ್ಕೆ ಒಳಪಡುವ ಪ್ರದೇಶದಲ್ಲಿ ಹೆಚ್ಚು ಪ್ರಚಾರದಲ್ಲಿರುವ ಎರಡು ದಿನಪತ್ರಿಕೆಗಳಲ್ಲಿ ಪ್ರಕಟಿಸತಕ್ಕದ್ದು ಮತ್ತು ಇವುಗಳಲ್ಲಿ ಒಂದು ಕನ್ನಡ ದಿನಪತ್ರಿಕೆಯಾಗಿರತಕ್ಕದ್ದು.

iii) ಸಂಬಂಧಪಟ್ಟ ಇಲಾಖೆಯ ವೆಬ್‌ಸೈಟ್‌ನಲ್ಲಿ ಪ್ರಕಟಿಸತಕ್ಕದ್ದು.

iv) ಗ್ರಾಮ ಚಾವಡಿ ಅಥವಾ ಗ್ರಾಮಪಂಚಾಯಿತಿ ಕಚೇರಿ ಅಥವಾ ನಗರ ಸ್ಥಳೀಯ ಸಂಸ್ಥೆಗಳು ಅಥವಾ ಗ್ರಾಮಲೆಕ್ಕಿಗರ ಕಚೇರಿಯಲ್ಲಿ ಪ್ರಕಟಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹೆಚ್. ಹಂದಿಗೋಳ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಸ್ವಾಧೀನ–2)

ದಿನಾಂಕ: 11 ಜುಲೈ 2014.

**ನಮೂನೆ – I**

**ಭಾಗ–ಎ ಸಾಮಾಜಿಕ ಪರಿಣಾಮ ನಿರ್ಧರಣೆಯ ಅಧಿಸೂಚನೆ**

**(ಅಧಿನಿಯಮದ ೪(೧)ನೇ ಪ್ರಕರಣವನ್ನು ನೋಡಿ)**

ಸಾಮಾಜಿಕ ಪರಿಣಾಮ ನಿರ್ಧರಣೆಯ ಅಧಿಸೂಚನೆಯು ಈ ಮುಂದಿನದನ್ನು ಒಳಗೊಳ್ಳತಕ್ಕದ್ದು:

– ಪ್ರಾಜೆಕ್ಟ್ ಅಭಿವೃದ್ಧಿಪಡಿಸುವವರ ಹೆಸರು; ಪ್ರಸ್ತಾವಿತ ಪ್ರಾಜೆಕ್ಟ್‌ನ ಸಂಕ್ಷಿಪ್ತ ವಿವರಣೆ ಮತ್ತು ಸ್ವಾಧೀನಪಡಿಸಿಕೊಳ್ಳಲು ಪ್ರಸ್ತಾವಿಸಿದ ಭೂಮಿಯ ವ್ಯಾಪ್ತಿ, ಪ್ರಾಜೆಕ್ಟ್ ಪ್ರದೇಶ ಮತ್ತು ಸಾಮಾಜಿಕ ಪರಿಣಾಮ ನಿರ್ಧರಣೆಯ ಮೂಲಕ ಒಳಗೊಳ್ಳುವ ಸ್ವಾಧೀನಕ್ಕೆ ಒಳಪಡುವ ಪ್ರದೇಶ.

– ಸಾಮಾಜಿಕ ಪರಿಣಾಮ ನಿರ್ಧರಣೆಯ ಮುಖ್ಯ ಉದ್ದೇಶಗಳು ಮತ್ತು ಪ್ರಮುಖ ಚಟುವಟಿಕೆಗಳಲ್ಲಿ (ಎ) ಸಮಾಲೋಚನೆಗಳು (ಬಿ) ಸರ್ವೇ (ಸಿ) ಸಾರ್ವಜನಿಕ ಅಹವಾಲು/ಗಳು ಒಳಗೊಂಡಿರವುದು.

– ಗ್ರಾಮಸಭೆಗಳು ಮತ್ತು/ ಅಥವಾ ಅಗತ್ಯಪಡಿಸಿದರೆ ಭೂಮಿಯ ಮಾಲೀಕರುಗಳು ಸಮಾಲೋಚನೆಗಳನ್ನು ಅಥವಾ ಒಪ್ಪಿಗೆಯನ್ನು ಅಧಿಸೂಚನೆಯಲ್ಲಿ ಅದನ್ನು ತಿಳಿಸಬೇಕು.

– ಸಾಮಾಜಿಕ ಪರಿಣಾಮ ನಿರ್ಧರಣೆಗಾಗಿ ಕಾಲಮಿತಿಗಳು ಮತ್ತು ಅದನ್ನು ಬಹಿರಂಗ ಪಡಿಸುವ ವಿಧಾನದ ರೀತಿಯ ಜೊತೆಯಲ್ಲಿ ಅಂತಿಮವಾಗಿ (ಸಾಮಾಜಿಕ ಪರಿಣಾಮ ನಿರ್ಧರಣಾ ವರದಿ ಮತ್ತು ಸಾಮಾಜಿಕ ಪರಿಣಾಮ ನಿರ್ವಹಣೆ ಯೋಜನೆ) ನಿರ್ವಹಿಸಿರುವುದನ್ನು ನಿರ್ದಿಷ್ಟಪಡಿಸಬೇಕು

– ಈ ಅವಧಿಯಲ್ಲಿ ಒತ್ತಾಯ ಮಾಡಿದ ಅಥವಾ ಬೆದರಿಕೆಹಾಕಿದ ಯಾವುದೇ ಪ್ರಯತ್ನವನ್ನು ಅಕೃತ ಮತ್ತು ಶೂನ್ಯವೆಂದು ಚಲಾಯಿಸಿದ ವಿವರಣಪತ್ರ

– ರಾಜ್ಯ ಸಾಮಾಜಿಕ ಪರಿಣಾಮ ನಿರ್ಧರಣಾ ಘಟಕದ ಸಂಪರ್ಕ ಮಾಹಿತಿ

**ಭಾಗ–ಬಿ ಸಾಮಾಜಿಕ ಪರಿಣಾಮ ನಿರ್ಧರಣೆಗಾಗಿ ಪರಿಶೀಲನಾಂಶಗಳು, ಆಯವ್ಯಯ ಮತ್ತು ಪ್ರೊಸೆಸಿಂಗ್ ಫೀಜು**

ರಾಜ್ಯ ಸರ್ಕಾರವು ಕಳುಹಿಸಿದ ಭೂ ಸ್ವಾಧೀನದ ಪ್ರಸ್ತಾವನೆಯನ್ನು ರಾಜ್ಯ ಸಾಮಾಜಿಕ ಪರಿಣಾಮ ನಿರ್ಧರಣಾ ಘಟಕವು, ಪರಿಶೀಲಿಸುವುದು ಮತ್ತು ನಿರ್ದಿಷ್ಟ ಪ್ರಾಜೆಕ್ಟ್‌ನ ಪರಿಶೀಲನಾಂಶಗಳನ್ನು (ಟಿಓಆರ್) ಮತ್ತು ಬಜೆಟನ್ನು ತಯಾರಿಸುವುದು. ಪರಿಶೀಲನಾಂಶಗಳು ಮತ್ತು ಬಜೆಟನ್ನು ಆಧರಿಸಿ

ಪ್ರೊಸೆಸಿಂಗ್ ಫೀಜನ್ನು ನಿರ್ಧರಿಸುವುದು ಭೂಮಿ ಅಗತ್ಯಪಡಿಸಿದ ಸಂಸ್ಥೆ/ವ್ಯಕ್ತಿಯು, ಅಧಿಸೂಚನೆಯನ್ನು ಹೊರಡಿಸುವ ಮುಂಚೆ ಸಾಮಾಜಿಕ ಪರಿಣಾಮ ನಿರ್ಧರಣೆ ಘಟಕದಲ್ಲಿ ಠೇವಣಿ ಇಡಬೇಕು.

ಪರಿಶೀಲನಾಂಶಗಳು (ಟಿಓಆರ್) ಈ ಮುಂದಿನ ಮಾಹಿತಿಯನ್ನು ಒಳಗೊಂಡಿರತಕ್ಕದ್ದು:

- ಪ್ರಾಜೆಕ್ಟ್, ಪ್ರಾಜೆಕ್ಟ್ ಪ್ರದೇಶ ಮತ್ತು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಉದ್ದೇಶಿಸಿದ ಭೂಮಿಯ ವಿಸ್ತೀರ್ಣದ ಸಂಕ್ಷಿಪ್ತ ವಿವರಣೆ
- ಸಾಮಾಜಿಕ ಪರಿಣಾಮ ನಿರ್ಧರಣಾ ತಂಡವು ಸಾಮಾಜಿಕ ಪರಿಣಾಮ ನಿರ್ಧರಣೆಯ ಉದ್ದೇಶಗಳನ್ನು ಮತ್ತು ಎಲ್ಲಾ ಚಟುವಟಿಕೆಗಳನ್ನು ನಿರ್ವಹಿಸಬೇಕು
- ಸಾಮಾಜಿಕ ಪರಿಣಾಮ ನಿರ್ಧರಣಾ ಕಾರ್ಯವಿಧಾನಕ್ಕಾಗಿ ದಿನಾಂಕಗಳೊಂದಿಗೆ, ಪ್ರಾಜೆಕ್ಟ್‌ನ ಮತ್ತು ಭೂ ಸ್ವಾಧೀನದ ಪ್ರಮಾಣ (ಅಳತೆ) ಮತ್ತು ಸಂಕೀರ್ಣತೆಯನ್ನು ಆಧರಿಸಿ, ಒಪ್ಪಿಸಿಕೊಳ್ಳುವುದಕ್ಕಾಗಿ ಮತ್ತು ಗ್ರಾಮಸಭೆ ಮತ್ತು/ಅಥವಾ ಅಗತ್ಯವೆಂದು ಕೋರಿದ ಭೂಮಾಲೀಕರ ಸಮ್ಮತಿ ಅಥವಾ ಸಮಾಲೋಚನೆಯನ್ನು ಅನುಕ್ರಮಗೊಳಿಸಲು, ನಿಗದಿಪಡಿಸಲು ಮತ್ತು ಅಂತಿಮಗಡುವನ್ನು ನಿರ್ವಹಿಸುವುದು
- ನಿರ್ದಿಷ್ಟಪಡಿಸಿದ ಪ್ರಾಜೆಕ್ಟ್‌ಗಾಗಿ ಸಾಮಾಜಿಕ ಪರಿಣಾಮ ನಿರ್ಧರಣೆ ನಡೆಸಲು ಅಗತ್ಯಪಡಿಸಿದ (ಅಗತ್ಯವಿದ್ದರೆ ಸಮೀಕ್ಷಾಕಾರರನ್ನು ಒಳಗೊಂಡಿರುವುದು) ಸಾಮಾಜಿಕ ಪರಿಣಾಮ ತಂಡದ ಸೂಕ್ತ ಪ್ರಮಾಣ ಮತ್ತು ವೈಶಿಷ್ಟತೆ
- ಪ್ರತಿಯೊಂದು ಬಾಬು/ ಚಟುವಟಿಕೆಗಳಿಗಾಗಿ ವೆಚ್ಚಗಳನ್ನು ಹಂತ ಹಂತವಾಗಿ ಸ್ಪಷ್ಟಪಡಿಸುವುದರೊಂದಿಗೆ ಪರಿಶೀಲನಾಂಶಗಳನ್ನು (ಟಿಓಆರ್) ಆಧರಿಸಿ ಪ್ರಾಜೆಕ್ಟ್ ನಿರ್ದಿಷ್ಟಪಡಿಸಿದ ಆಯವ್ಯಯ
- ಒಂದು ಪ್ರಾಜೆಕ್ಟ್ – ಪರಿಶೀಲನಾಂಶಗಳ ಆಧಾರದ ಮೇಲೆ, ಪ್ರತಿಯೊಂದು ಬಾಬಿಗಾಗಿ/ಚಟುವಟಿಕೆಗಾಗಿ ವೆಚ್ಚಗಳನ್ನು ಹಂತ ಹಂತವಾಗಿ ಸ್ಪಷ್ಟಪಡಿಸುವ ನಿರ್ದಿಷ್ಟಪಡಿಸಿದ ಬಜೆಟ್.
- ಸಾಮಾಜಿಕ ಪರಿಣಾಮ ನಿರ್ಧರಣಾ ಕಾರ್ಯ ವಿಧಾನದಲ್ಲಿ ಸ್ಪಷ್ಟಪಡಿಸಿದ ಪರಿಭಾಷೆಗೆ ಒಳಪಟ್ಟ ನಿರ್ವಹಿಸಿದ ಸಾಮಾಜಿಕ ಪರಿಣಾಮ ನಿರ್ಧರಣಾ ತಂಡಕ್ಕೆ ನಿಧಿಯನ್ನು ಹಂಚುವುದಕ್ಕಾಗಿ ನಿಗದಿಪಡಿಸುವುದು.

ಪರಿಶೀಲನಾಂಶಗಳ ಆಧಾರದ ಮೇಲೆ ಮತ್ತು ಪ್ರತಿಯೊಂದು ನಿರ್ದಿಷ್ಟಪಡಿಸಿದ ಪ್ರಾಜೆಕ್ಟ್‌ಗಾಗಿ ಅಭಿವೃದ್ಧಿಪಡಿಸಿದ ಬಜೆಟನ್ನು ಆಧರಿಸಿ ಪ್ರೊಸೆಸಿಂಗ್ ಫೀಜನ್ನು ನಿರ್ಧರಿಸುವುದು ಮತ್ತು ಪ್ರಾಜೆಕ್ಟ್ ಮತ್ತು ಸ್ವಾಧೀನಕ್ಕಾಗಿ ಉದ್ದೇಶಿಸಿದ ಭೂಮಿಯ ಮಾದರಿ ಮತ್ತು ಪ್ರಮಾಣ, ಸ್ಥಳ ಮತ್ತು ಸೂಕ್ಷ್ಮತೆಗಳನ್ನು ಆಧರಿಸಿದೆ.

- ಪ್ರೊಸೆಸಿಂಗ್ ಫೀಜಿನ ಬಾಂಡುಗಳ ಸಂಬಂಧದಲ್ಲಿನ ಮಾಹಿತಿ ಮತ್ತು ಪ್ರತ್ಯೇಕ ಅಂಶಗಳು/ಸಮಾನಾಂತರ ಬಾಬುಗಳಿಗಾಗಿ ವೆಚ್ಚಗಳನ್ನು ಸುಸಂಗತವಾಗಿ ಮಾಡಬೇಕು ಮತ್ತು ಮುಂಗಡದಲ್ಲಿ ಅದರ ವೆಚ್ಚಗಳನ್ನು ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿಯು ಹಾಗೆ ಸುಲಭವಾಗಿ ನೋಡುವ ಅವಕಾಶ ಇರಬೇಕು. ಈ ದರಗಳನ್ನು ಕಾಲಕಾಲಕ್ಕೆ ಪರಿಶೀಲಿಸತಕ್ಕದ್ದು ಮತ್ತು ಪರಿಷ್ಕರಿಸತಕ್ಕದ್ದು.
- ಶುಲ್ಕವು ನಿಗದಿಪಡಿಸಿದ ಪ್ರಮಾಣವನ್ನು ರಾಜ್ಯ ಸಾಮಾಜಿಕ ಪರಿಣಾಮ ನಿರ್ಧರಣಾ ಘಟಕದ ವೆಚ್ಚಗಳನ್ನು ಭರಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹೆಚ್. ಹಂದಿಗೋಳ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಸ್ವಾಧೀನ–2)

ದಿನಾಂಕ: 11 ಜುಲೈ 2014.

**ನಮೂನೆ – II**

**ಸಾಮಾಜಿಕ ಪರಿಣಾಮ ನಿರ್ಧರಣಾ ವರದಿ (ಅಧಿನಿಯಮದ ೧೯ನೇ ಪ್ರಕರಣದ ೨(ಡಿ) ಉಪಪ್ರಕರಣವನ್ನು ನೋಡಿ)**

ಎ. ಸಾಮಾಜಿಕ ಪರಿಣಾಮ ನಿರ್ಧರಣೆ ಮೂಲಕ ಒಳಗೊಳ್ಳಬೇಕಾದ ಸಮಾಜಿಕ–ಆರ್ಥಿಕ ಮತ್ತು ಸಾಂಸ್ಕೃತಿಕ ಮಾನದಂಡಗಳ ಪಟ್ಟಿ

- ಪ್ರಾಜೆಕ್ಟ್ ಪ್ರದೇಶದಲ್ಲಿ ಜನಸಂಖ್ಯೆಯ ಸಾಂದ್ರತೆಯ ವಿವರಗಳು
  - ವಯಸ್ಸು, ಲಿಂಗ, ಜಾತಿ, ಧರ್ಮ
  - ಸಾಕ್ಷರತೆ, ಆರೋಗ್ಯ ಮತ್ತು ಪೋಷಣೆಯ ಸ್ಥಿತಿ
- ಬಡತನದ ಮಟ್ಟಗಳು
- ಒಳಪಡುವ ಸಮೂಹಗಳು
  - ಮಹಿಳೆಯರು, ಮಕ್ಕಳು, ಹಿರಿಯರು, ಮಹಿಳಾ ಪ್ರಧಾನ ಕುಟುಂಬಗಳು, ವಿಕಲ ಚೇತನರು
- ಕುಟುಂಬದಲ್ಲಿನ ರಕ್ತಸಂಬಂಧಿ ಪದ್ಧತಿಗಳು ಮತ್ತು ಮಹಿಳೆಯ ಪಾತ್ರ
- ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘಟನೆ

- ಆಡಳಿತಾತ್ಮಕ ಸಂಘಟನೆ
- ರಾಜಕೀಯ ಸಂಘಟನೆ
- ನಾಗರಿಕ ಸಮಾಜ ಸಂಘಟನೆಗಳು ಮತ್ತು ಸಾಮಾಜಿಕ ಚಲನವಲನಗಳು
- ಬಳಸಿದ ಭೂ ಪ್ರದೇಶ ಮತ್ತು ಜೀವನೋಪಾಯ
  - ಕೃಷಿ ಮತ್ತು ಕೃಷಿಯೇತರ ಬಳಕೆ
  - ಭೂಪ್ರದೇಶ–ಮಣ್ಣು, ನೀರು, ಮರಗಳು, ಇತ್ಯಾದಿಗಳ ಗುಣಮಟ್ಟ
  - ಜಾನುವಾರುಗಳು
  - ಔಪಚಾರಿಕ ಮತ್ತು ಅನೌಪಚಾರಿಕ ಕೆಲಸ ಮತ್ತು ಉದ್ಯೋಗ
  - ಕಾರ್ಮಿಕರ ಮತ್ತು ಮಹಿಳೆಯರ ಕೆಲಸದ ಕುಟುಂಬದ ವಿಭಾಗ
  - ವಲಸೆ
  - ಕುಟುಂಬ ಆದಾಯದ ಮಟ್ಟಗಳು
  - ಜೀವನೋಪಾಯದ ಆದ್ಯತೆಗಳು
  - ಆಹಾರ ಭದ್ರತೆ
- ಸ್ಥಳೀಯ ಆರ್ಥಿಕ ಚಟುವಟಿಕೆಗಳು
  - ಔಪಚಾರಿಕ ಮತ್ತು ಅನೌಪಚಾರಿಕ, ಸ್ಥಳೀಯ ಕೈಗಾರಿಕೆಗಳು
  - ಮನ್ನಣೆಗೆ ಅವಕಾಶ
  - ಮಜೂರಿ ದರಗಳು
  - ಮಹಿಳೆಯರು ತೊಡಗಿಸಿಕೊಂಡಿರುವ ನಿರ್ದಿಷ್ಟ ಜೀವನೋಪಾಯ ಒಳಗೊಂಡಿರುವ ಚಟುವಟಿಕೆಗಳು
- ಸ್ಥಳೀಯ ಜೀವನೋಪಾಯಗಳಿಗೆ ನೆರವಾಗುವ ಅಂಶಗಳು
  - ನೈಸರ್ಗಿಕ ಸಂಪನ್ಮೂಲಗಳಿಗೆ ಅವಕಾಶ
  - ಸಾಮಾನ್ಯ ಸ್ವತ್ತಿನ ಸಂಪನ್ಮೂಲಗಳು
  - ಖಾಸಗಿ ಆಸ್ತಿಗಳು
  - ರಸ್ತೆಗಳು, ಸಾರಿಗೆ
  - ನೀರಾವರಿ ಸೌಲಭ್ಯಗಳು
  - ಮಾರುಕಟ್ಟೆಗಳಿಗೆ ಅವಕಾಶ
  - ಪ್ರವಾಸೀ ಸ್ಥಳಗಳು
  - ಜೀವನೋಪಾಯವನ್ನು ಉತ್ತೇಜಿಸುವ ಕಾರ್ಯಕ್ರಮಗಳು
  - ಸಹಕಾರ ಸಂಘಗಳು ಮತ್ತು ಇತರ ಜೀವನೋಪಾಯಕ್ಕೆ ಸಂಬಂಧಿಸಿದ ಸಂಘಗಳು
- ಜೀವನ ನಿರ್ವಹಣೆ ವಾತಾವರಣದ ಗುಣಮಟ್ಟಗಳು
  - ಗ್ರಹಿಕೆಗಳು, ಸದಭಿರುಚಿಯ ಗುಣಮಟ್ಟಗಳು, ಆಸಕ್ತಿ ಮತ್ತು ಆಕಾಂಕ್ಷೆಗಳು.
  - ಇತ್ಯರ್ಥ ವಿಧಾನಗಳು
  - ಮನೆಗಳು
  - ಸಮುದಾಯ ಮತ್ತು ನಾಗರಿಕ ಸ್ಥಳಗಳು
  - ಧಾರ್ಮಿಕ ಸ್ಥಳಗಳು ಮತ್ತು ಸಾಂಸ್ಕೃತಿಕ ಒಳಗೊಳ್ಳುವಿಕೆ
  - ಭೌತಿಕ ಮೂಲಸೌಲಭ್ಯಗಳು (ನೀರು ಸರಬರಾಜು, ಗ್ರಾಮಸಾರ ವ್ಯವಸ್ಥೆಗಳು ಇತ್ಯಾದಿಗಳನ್ನು ಒಳಗೊಂಡಿರುವುದು)
  - ಸಾರ್ವಜನಿಕ ಸೇವಾ ಮೂಲ ಸೌಲಭ್ಯಗಳು (ಶಾಲೆಗಳು, ಆರೋಗ್ಯ ಕೇಂದ್ರಗಳು, ಅಂಗನವಾಡಿ ಕೇಂದ್ರಗಳು, ಸಾರ್ವಜನಿಕ ವಿತರಣಾ ವ್ಯವಸ್ಥೆ)
  - ರಕ್ಷಣೆ, ಅಪರಾಧ, ಹಿಂಸೆ
  - ಮಹಿಳೆಯರ ಸಾಮಾಜಿಕ ಸಂಘಟನೆ ಕೇಂದ್ರಗಳು
  -

**ಬಿ. ಪ್ರಮುಖ ಪರಿಣಾಮ ಪ್ರದೇಶಗಳು**

**ಭೂ ಪ್ರದೇಶ, ಜೀವನೋಪಾಯಗಳು ಮತ್ತು ಆದಾಯದ ಮೇಲಿನ ಪರಿಣಾಮಗಳು**

- ಉದ್ಯೋಗದ ಮಟ್ಟ ಹಾಗೂ ಅದರ ವಿಧಾನಗಳು
- ಕುಟುಂಬದ ಒಳಗಿನ ಉದ್ಯೋಗದ ಪದ್ಧತಿಗಳು
- ಆದಾಯ ಮಟ್ಟಗಳು
- ಆಹಾರ ಭದ್ರತೆ
- ಜೀವನ ನಿರ್ವಹಣೆ ಮಟ್ಟ
- ಉತ್ಪಾದನಾ ಸಂಪನ್ಮೂಲಗಳ ಮೇಲಿನ ಅವಕಾಶ ಮತ್ತು ನಿಯಂತ್ರಣ
- ಆರ್ಥಿಕ ಅವಲಂಬನೆ ಅಥವಾ ಗುರಿಯಾಗುವಿಕೆ
- ಸ್ಥಳೀಯ ಆರ್ಥಿಕತೆಗೆ ಅಡ್ಡಿಯುಂಟು ಮಾಡುವಿಕೆ
- ಸುಧಾರಣೆಗೆ ತೊಂದರೆಗಳು
- ಜೀವನೋಪಾಯದ ಪರ್ಯಾಯ ಮಾರ್ಗಗಳಿಗೆ ಮಹಿಳೆಯರ ಪ್ರವೇಶ

**ಭೌತಿಕ ಸಂಪನ್ಮೂಲಗಳ ಮೇಲೆ ಪರಿಣಾಮಗಳು**

- ನೈಸರ್ಗಿಕ ಸಂಪನ್ಮೂಲಗಳಾದ ಮಣ್ಣು, ಗಾಳಿ, ನೀರು, ಅರಣ್ಯಗಳ ಮೇಲೆ ಪರಿಣಾಮಗಳು
- ಜೀವನಾಧಾರಗಳಿಗಾಗಿ ಭೂಮಿ ಮತ್ತು ನೈಸರ್ಗಿಕ ಸಂಪನ್ಮೂಲಗಳ ಸಾಮಾನ್ಯ ಸ್ವತ್ತುಗಳ ಮೇಲೆ ಒತ್ತಡಗಳು

**ಖಾಸಗಿ ಆಸ್ತಿಗಳ, ಸಾರ್ವಜನಿಕ ಸೇವೆಗಳ ಮತ್ತು ಬಳಕೆಗಳ ಮೇಲೆ ಪರಿಣಾಮ**

- ಅಸ್ತಿತ್ವದಲ್ಲಿರುವ ಆರೋಗ್ಯ ಮತ್ತು ಶೈಕ್ಷಣಿಕ ಸೌಲಭ್ಯಗಳ ಸಾಮರ್ಥ್ಯತೆ
- ವಸತಿ ಸೌಲಭ್ಯಗಳ ಸಾಮರ್ಥ್ಯತೆ
- ಸ್ಥಳೀಯ ಸೇವೆಗಳ ಪೂರೈಕೆಯ ಮೇಲೆ ಒತ್ತಡಗಳು
- ವಿದ್ಯುಚ್ಛಕ್ತಿ ಮತ್ತು ನೀರು ಸರಬರಾಜು, ರಸ್ತೆಗಳು, ನೈರ್ಮಲ್ಯ ಮತ್ತು ತಾಜ್ಯ ನಿರ್ವಹಣೆ ವ್ಯವಸ್ಥೆಯೂ ಸಾಕಷ್ಟಿರುವುದು
- ಕೊಳವೆ ಬಾವಿಗಳು, ತಾತ್ಕಾಲಿಕ ಷೆಡ್‌ಗಳು ಮುಂತಾದವುಗಳಂಥ ಖಾಸಗಿ ಆಸ್ತಿಗಳ ಮೇಲೆ ಪರಿಣಾಮ

**ಆರೋಗ್ಯ ಪರಿಣಾಮಗಳು**

- ವಲಸೆಯ ಕಾರಣದಿಂದ ಆರೋಗ್ಯದ ಮೇಲೆ ಉಂಟಾಗುವ ಪರಿಣಾಮಗಳು
- ಪ್ರಾಜೆಕ್ಟ್ ಚಟುವಟಿಕೆಗಳ ಕಾರಣದಿಂದ ಆರೋಗ್ಯದ ಮೇಲೆ ಉಂಟಾಗುವ ಪರಿಣಾಮಗಳು ವಿಶೇಷ ಒತ್ತು ನೀಡುವುದರ ಮೂಲಕ
- ಮಹಿಳೆಯರ ಆರೋಗ್ಯದ ಮೇಲೆ ಪರಿಣಾಮ
- ವಯೋವೃದ್ಧರ ಮೇಲೆ ಉಂಟಾಗುವ ಪರಿಣಾಮ

**ಸಾಂಸ್ಕೃತಿಕ ಮತ್ತು ಸಾಮಾಜಿಕ ಪ್ರವೃತ್ತಿಗಳ ಮೇಲೆ ಪರಿಣಾಮಗಳು**

- ಸ್ಥಳೀಯ ರಾಜಕೀಯ ಸ್ವರೂಪಗಳ ಪರಿವರ್ತನೆ
- ಜನಸಂಖ್ಯಾ ವ್ಯತ್ಯಾಸಗಳು
- ಆರ್ಥಿಕ–ಜೀವಿ ಪರಿಸರ ಸಮತೋಲನದಲ್ಲಿ ಪಲ್ಲಟಗಳು
- ಮಾರ್ಗಸೂಚಿಗಳ, ನಂಬಿಕೆಗಳ, ಮೌಲ್ಯಗಳ ಮತ್ತು ಸಾಂಸ್ಕೃತಿಕ ಬದುಕಿನ ಮೇಲೆ ಉಂಟಾಗುವ ಪರಿಣಾಮಗಳು
- ಅಪರಾಧ ಮತ್ತು ಅಕ್ರಮ ಚಟುವಟಿಕೆಗಳು
- ಸ್ಥಳಾಂತರದ ಒತ್ತಡ
- ಒಟ್ಟು ಕುಟುಂಬ ಪ್ರತ್ಯೇಕತೆಯ ಪರಿಣಾಮ
- ಮಹಿಳೆ ಮೇಲೆ ದೌರ್ಜನ್ಯ

**ಪ್ರಾಜೆಕ್ಟ್ ಆವರ್ತನದ ವಿವಿಧ ಹಂತಗಳಲ್ಲಿ ಪರಿಣಾಮಗಳು**

ಸಾಮಾಜಿಕ ಪರಿಣಾಮಗಳ ಬಗೆಗಳು, ಕಾಲ, ಅವಧಿ ಮತ್ತು ಪ್ರಮಾಣಗಳು ಪ್ರಾಜೆಕ್ಟ್ ಆವರ್ತದ ಹಂತಗಳ ಮೇಲೆ ನಿಕಟವಾಗಿ ಅವಲಂಬಿಸಿದ್ದು ಮತ್ತು ಅದಕ್ಕೆ ಸಂಬಂಧಿಸಿದ್ದು ಪರಿಣಾಮಗಳ ಸೂಚನಾಪಟ್ಟಿಯು ಕೆಳಗಿನಂತಿದೆ:

**ನಿರ್ಮಾಣ ಪೂರ್ವ ಹಂತ**

– ಸೇವೆಗಳನ್ನು ನೀಡುವಲ್ಲಿ ಅಡ್ಡಿಯುಂಟು ಮಾಡುವುದು.

– ಉತ್ಪಾದನಾ ಹೂಡಿಕೆಯನ್ನು ಕೈ ಬಿಡುವುದು

– ಭೂ ಸಟ್ಟಾ ವ್ಯಾಪಾರ

– ಸಂದಿಗ್ಧತೆಯ ಒತ್ತಡ

**ನಿರ್ಮಾಣ ಹಂತ**

– ಸ್ಥಳಾಂತರ ಮತ್ತು ಹೊಸ ಸ್ಥಳ

– ನಿರ್ಮಾಣದ ಕೆಲಸದ ತಂಡ ವಲಸೆ ಬರುವುದು.

– ನಿರ್ಮಾಣದ ಜಾಗದ ಹತ್ತಿರದಲ್ಲಿ ನಿರಂತರವಾಗಿ ವಾಸಿಸುವವಂಥವರ ಮೇಲೆ ಆರೋಗ್ಯದ ಪರಿಣಾಮಗಳು

**ನಿರ್ವಹಣೆಯ ಹಂತ**

– ನಿರ್ಮಾಣ ಹಂತಕ್ಕೆ ಹೋಲಿಸಿದಾಗ ಉದ್ಯೋಗ ಅವಕಾಶಗಳು ಕಡಿಮೆಯಾಗುವುದು

– ಪ್ರಾಜೆಕ್ಟ್‌ನ ಆರ್ಥಿಕ ಲಾಭಗಳು

– ಹೊಸ ಮೂಲ ಸೌಕರ್ಯಗಳ ಮೇಲಿನ ಪ್ರಯೋಜನಗಳು

– ಸಾಮಾಜಿಕ ಸಂರಚನೆಯ ಹೊಸ ಮಾದರಿಗಳು

**ಕಾರ್ಯಾಚರಣೆಯಿಂದ ತೆಗೆದುಹಾಕುವ ಹಂತ**

– ಆರ್ಥಿಕ ಅವಕಾಶಗಳ ನಷ್ಟ

– ಪರಿಸರದ ಅವನತಿ ಮತ್ತು ಜೀವನೋಪಾಯಗಳ ಮೇಲೆ ಅವುಗಳ ಪರಿಣಾಮ

**ಪ್ರತ್ಯಕ್ಷ ಮತ್ತು ಪರೋಕ್ಷ ಪರಿಣಾಮಗಳು**

– "ಪ್ರತ್ಯಕ್ಷ ಪರಿಣಾಮಗಳು" ಸಂತ್ರಸ್ತ ಕುಟುಂಬಗಳು ಅನುಭವಿಸಬೇಕಾದ ಸಂಭವಿರುವ ಎಲ್ಲಾ ಪರಿಣಾಮಗಳನ್ನು ಒಳಗೊಳ್ಳುತ್ತದೆ.

– "ಪರೋಕ್ಷ ಪರಿಣಾಮಗಳು" ಭೂಸ್ವಾಧೀನದಿಂದ ನೇರವಾಗಿ ಒಳಪಡದೆ ಇರುವ (ಎಂದರೆ, ನೇರವಾಗಿ ಭೂಮಿ ಮತ್ತು ಜೀವನೋಪಾಯವನ್ನು ಕಳೆದುಕೊಂಡವರು), ಆದರೆ ಪ್ರಾಜೆಕ್ಟ್ ಪ್ರದೇಶದಲ್ಲಿ ವಾಸಿಸುತ್ತಿರುವವರು ಅನುಭವಿಸಬಹುದಾದ ಎಲ್ಲಾ ಪರಿಣಾಮಗಳನ್ನು ಒಳಗೊಳ್ಳುತ್ತದೆ.

**ವಿಭಿನ್ನ ರೀತಿಯ ಪರಿಣಾಮಗಳು**

– ಮಹಿಳೆಯರು, ಮಕ್ಕಳು, ಹಿರಿಯರು ಮತ್ತು ವಿಕಲ ಚೇತನರ ಮೇಲೆ ಉಂಟಾಗುವ ಪರಿಣಾಮಗಳು

– ಲಿಂಗ ಪರಿಣಾಮ ನಿರ್ಧರಣೆ ತಪಶೀಲು ಪಟ್ಟಿಗಳು ಮತ್ತು ಗುರಿಯಾಗುವ ಮತ್ತು ರಿಸೈಲೆನ್ಸ್ ಮ್ಯಾಪಿಂಗ್‌ನಂಥ ಸಾಧನಗಳ ಮೂಲಕ ಗುರುತಿಸಲಾದ ಪರಿಣಾಮಗಳು.

**ಒಟ್ಟು ಪರಿಣಾಮಗಳು**

– ವಿವಾದಿತ ಪ್ರಾಜೆಕ್ಟ್‌ಗಾಗಿ ಗುರುತಿಸಲಾದ ಪರಿಣಾಮಗಳೊಂದಿಗೆ ಆ ಪ್ರದೇಶದಲ್ಲಿರುವ ಇತರ ಪ್ರಾಜೆಕ್ಟ್‌ಗಳ ನಿರ್ಧರಿಸಬಹುದಾದ ಮತ್ತು ಸಂಭಾವ್ಯ ಪರಿಣಾಮಗಳು.

– ಪ್ರಾಜೆಕ್ಟ್ ಪ್ರದೇಶದಲ್ಲಿ ನೇರವಾಗಿ ಪರಿಣಾಮ ಉಂಟಾಗದೆಯಿರುವ ಆದರೆ ಸ್ಥಳೀಯವಾಗಿ ಅಥವಾ ಪ್ರಾದೇಶಿಕವಾಗಿ ಉಂಟಾಗುವ ಪರಿಣಾಮ.

**ಸಿ. ಸಾಮಾಜಿಕ ಪರಿಣಾಮ ನಿರ್ಧರಣಾ ವರದಿ ಹಾಗೂ ಸಾಮಾಜಿಕ ಪರಿಣಾಮ ವ್ಯವಸ್ಥಾಪನಾ ಯೋಜನೆಗಾಗಿ ವಿಷಯಸೂಚಕ ಕೋಷ್ಟಕ**

| ಅಧ್ಯಾಯ | ವಿಷಯ ಸೂಚಿ |
|---|---|
| **ಕಾರ್ಯನಿರ್ವಾಹಕ ಸಾರಾಂಶ** | – ಪ್ರಾಜೆಕ್ಟ್ ಮತ್ತು ಸಾರ್ವಜನಿಕ ಉದ್ದೇಶ<br>– ಸ್ಥಳ<br>– ಭೂ ಸ್ವಾಧೀನದ ಅಳತೆ ಮತ್ತು ಗುರುತುಗಳು<br>– ಪರಿಗಣಿಸಲಾದ ಪರ್ಯಾಯಗಳು<br>– ಸಾಮಾಜಿಕ ಪರಿಣಾಮಗಳು<br>– ನಿವಾರಣಾ ಕ್ರಮಗಳು<br>– ಸಾಮಾಜಿಕ ವೆಚ್ಚಗಳು ಮತ್ತು ಪ್ರಯೋಜನಗಳ ನಿರ್ಧರಣೆ |
| **ವಿವರವಾದ ಪ್ರಾಜೆಕ್ಟ್ ವಿವರಣೆ** | – ಡೆವಲಪರ್‌ಗಳ ಹಿನ್ನೆಲೆಯೂ ಒಳಗೊಂಡಂತೆ ಆಡಳಿತ / ವ್ಯವಸ್ಥಾಪನೆ ರಚನೆ ಪ್ರಾಜೆಕ್ಟ್ ಹಿನ್ನೆಲೆ.<br>– ಭೂ ಸ್ವಾಧೀನತೆಯಲ್ಲಿ ಪಾರದರ್ಶಕತೆ ಮತ್ತು ನ್ಯಾಯೋಚಿತ ಹಕ್ಕು, ಪುನರ್ ವಸತಿ ಮತ್ತು ಪುನರ್ ವ್ಯವಸ್ಥೆ ಅಧಿನಿಯಮ, ೨೦೧೩ರಲ್ಲಿ ಪಟ್ಟಿ ಮಾಡಿದ ಸಾರ್ವಜನಿಕ ಉದ್ದೇಶ ಪ್ರಮಾಣಗಳನ್ನು ಪ್ರಾಜೆಕ್ಟ್ ಹೇಗೆ ಸೇರಿಸಿದೆ ಎಂಬುದನ್ನು ಒಳಗೊಂಡು ಪ್ರಾಜೆಕ್ಟ್‌ನ ತಾರ್ಕಿಕ ವಿವರಣೆ.<br>– ಪ್ರಾಜೆಕ್ಟ್‌ನ ಪ್ರಮಾಣ, ಸ್ಥಳ, ಸಾಮರ್ಥ್ಯ, ಉತ್ಪನ್ನಗಳು, ಉತ್ಪಾದನಾ ಗುರಿಗಳು, ವೆಚ್ಚ, ಅಪಾಯಗಳ ವಿವರಗಳು |

| | |
|---|---|
| | – ಪರ್ಯಾಯಗಳ ತಪಾಸಣೆ<br>– ಪ್ರಾಜೆಕ್ಟ್ ನಿರ್ಮಾಣದ ಹಂತಗಳು<br>– ಭೂಗರ್ಭದ ವಿನ್ಯಾಸದ ಲಕ್ಷಣಗಳು ಮತ್ತು ಗಾತ್ರ ಹಾಗೂ ಸೌಲಭ್ಯಗಳ ವಿಧಾನ<br>– ಮೂಲ ಸೌಕರ್ಯಗಳಿಗೆ ನೆರವಾಗುವುದಕ್ಕಾಗಿ ಅವಶ್ಯಕತೆ<br>– ಕಾರ್ಯಪಡೆಯ ಅಗತ್ಯತೆಗಳು (ತಾತ್ಕಾಲಿಕ ಅಥವಾ ಖಾಯಂ)<br>– ಈಗಾಗಲೇ ನಿರ್ವಹಿಸಲಾದ ಮತ್ತು ಯಾವುದೇ ತಾಂತ್ರಿಕ ಸಾಧ್ಯತೆಯ ವರದಿಗಳು ಇದ್ದರೆ ಆ ಸಾಮಾಜಿಕ ಪರಿಣಾಮ ನಿರ್ಧರಣೆ/ಇಐಎ ವಿವರಗಳು<br>– ಅನ್ವಯವಾಗುವ ಶಾಸನಗಳು ಮತ್ತು ನೀತಿಗಳು |
| ಸಾಮಾಜಿಕ ಪರಿಣಾಮ ನಿರ್ಧರಣೆಯ ತಂಡದ ರಚನೆ, ಪ್ರಸ್ತಾಪಗಳು, ವಿಧಾನಗಳು ಮತ್ತು ಕಾರ್ಯಯೋಜನೆಗಳು | – ವಿದ್ಯಾರ್ಹತೆಗಳೊಂದಿಗೆ ತಂಡದ ಎಲ್ಲ ಸದಸ್ಯರ ಪಟ್ಟಿ, ತಂಡದಲ್ಲಿ ಒಳಗೊಂಡಿರಬೇಕಾದ ಲಿಂಗ ತಜ್ಞರು.<br>– ಸಾಮಾಜಿಕ ಪರಿಣಾಮ ನಿರ್ಧರಣೆಗಾಗಿ ಮಾಹಿತಿಯನ್ನು ಸಂಗ್ರಹಿಸಲು ಬಳಸಲಾದ ವಿಧಾನಗಳು ಮತ್ತು ಸಾಧನಗಳಿಗಾಗಿ ವಿವರಣೆ ಮತ್ತು ತಾರ್ಕಿಕ ವಿವರಣೆ<br>– ಬಳಸಲಾದ ಮಾದರಿ ವಿಧಾನಗಳು<br>– ಬಳಸಲಾದ ಮಾಹಿತಿ/ಅಂಕಿ ಅಂಶಗಳ ಮೂಲಗಳ ಸ್ಥೂಲ ಸಮೀಕ್ಷೆ ವಿವರವಾದ ಉಲ್ಲೇಖವನ್ನು ಪ್ರತ್ಯೇಕವಾಗಿ ನಮೂನೆಗಳಲ್ಲಿ ಒಳಗೊಂಡಿರಬೇಕು.<br>– ಪ್ರಮುಖ ಮಧ್ಯಸ್ಥಗಾರರೊಂದಿಗೆ ಸಮಾಲೋಚಿಸಿದ ಕಾರ್ಯಯೋಜನೆಗಳು ಮತ್ತು ಸಾರ್ವಜನಿಕ ಅಹವಾಲನ್ನು ನಡೆಸಿದ ಬಗ್ಗೆ ಸಂಕ್ಷಿಪ್ತ ವಿವರಣೆ, ಸಾರ್ವಜನಿಕ ಅಹವಾಲುಗಳ ವಿವರಗಳು ಮತ್ತು ವರದಿಯಲ್ಲಿ ಸೇರಿಸಲಾದ ನಿರ್ದಿಷ್ಟ ಮಾಹಿತಿಗಳು ನಮೂನೆಗಳಲ್ಲಿ ಒಳಗೊಂಡಿರಬೇಕು. |
| ಭೂ ನಿರ್ಧರಣೆ | – ನಕ್ಷೆಗಳ ನೆರವಿನೊಂದಿಗೆ ವಿವರಣೆ, ಭೂ ತಪಶೀಲು ಪಟ್ಟಿ ಮಾಹಿತಿಯನ್ನು ಮತ್ತು ಪ್ರಾಥಮಿಕ ಮೂಲಗಳಿಂದ ಮಾಹಿತಿಗಳು<br>– ಪ್ರಾಜೆಕ್ಟ್‌ನ ಪ್ರಭಾವದ ಪರಿಣಾಮದಡಿಯಲ್ಲಿ ಬರಬಹುದಾದ ಸಮಗ್ರ ಪ್ರದೇಶ (ಸ್ವಾಧೀನತೆಗಾಗಿ ಭೂ ಪ್ರದೇಶಕ್ಕೆ ಸೀಮಿತಗೊಳಿಸದೆ ಇರುವುದು)<br>– ಪ್ರಾಜೆಕ್ಟ್‌ಗಾಗಿ ಒಟ್ಟು ಅಗತ್ಯತೆಯಿರುವ ಭೂಮಿ.<br>– ಪ್ರಾಜೆಕ್ಟ್ ಪ್ರದೇಶದ ಹತ್ತಿರದಲ್ಲಿ ಪ್ರಸ್ತುತ ಯಾವುದೇ ಸಾರ್ವಜನಿಕ ಬಳಕೆಯ, ಬಳಕೆಯಾಗದಿರುವ ಭೂಮಿ<br>– ಪ್ರಾಜೆಕ್ಟ್‌ಗಾಗಿ ಅಗತ್ಯಪಡಿಸಿದ ಪ್ರತಿಯೊಂದು ಪ್ಲಾಟ್ ಭೂಮಿಗಾಗಿ ಭೂಮಿಯನ್ನು ಈಗಾಗಲೇ ಖರೀದಿಸಿದ, ಪರಭಾರೆ ಮಾಡಿದ, ಗುತ್ತಿಗೆ ನೀಡಿದ ಅಥವಾ ಸ್ವಾಧೀನಪಡಿಸಿಕೊಂಡ ಮತ್ತು ಬಳಕೆ ಮಾಡಿಕೊಳ್ಳಲು ಉದ್ದೇಶಿಸಲಾದ ಭೂಮಿ, (ಯಾವುದಾದರೂ ಇದ್ದರೆ)<br>– ಪ್ರಾಜೆಕ್ಟ್‌ಗಾಗಿ ಸ್ವಾಧೀನಪಡಿಸಿಕೊಳ್ಳಲು ಪ್ರಸ್ತಾವಿಸಿದ ಭೂಮಿಯ ಪ್ರಮಾಣ ಮತ್ತು ಸ್ಥಳ;<br>– ಭೂಮಿಯ ಸ್ವರೂಪ, ಪ್ರಸ್ತುತ ಬಳಕೆ ಮತ್ತು ವರ್ಗೀಕರಣ ಮತ್ತು ಕೃಷಿ ಭೂಮಿ, ನೀರಾವರಿಗೆ ಒಳಪಟ್ಟ ಮತ್ತು ಬೆಳೆ ವಿಧಾನಗಳು, ಇದ್ದರೆ;<br>– ಹಿಡುವಳಿಗಳ ಪ್ರಮಾಣ, ಮಾಲೀಕತ್ವದ ವಿಧಾನಗಳು, ಭೂ ಹಂಚಿಕೆ ಮತ್ತು ವಾಸ ಮನೆಗಳ ಸಂಖ್ಯೆ;<br>– ಭೂಮಿಯ ಬೆಲೆಗಳು ಮತ್ತು ಇತ್ತೀಚಿನ ಮಾಲೀಕತ್ವದಲ್ಲಿ ಬದಲಾವಣೆಗಳು, ವರ್ಗಾವಣೆ ಮತ್ತು ಕಳೆದ ಮೂರು ವರ್ಷಗಳಲ್ಲಿ ಭೂಮಿಯ ಬಳಕೆ; |
| ಸಂತ್ರಸ್ತ ಕುಟುಂಬಗಳ ಮತ್ತು ಆಸ್ತಿಗಳ ಅಂದಾಜು ಮತ್ತು ಖಾತೆವಾರು ತೋರಿಸಿದ ಪಟ್ಟಿ (ಅಗತ್ಯವಿರುವಲ್ಲಿ) | – ಕುಟುಂಬಗಳನ್ನು ಈ ಮುಂದಿನ ವಿಧಾನಗಳಲ್ಲಿ ಅಂದಾಜು ಮಾಡುವುದು,–<br>(ಎ) ನೇರವಾಗಿ ಸ್ವಾಧೀನಕ್ಕೆ ಒಳಪಡುವುದು ಭೂಮಿ (ಸ್ವಾಧೀನಪಡಿಸಿಕೊಳ್ಳಬೇಕೆಂದು ಪ್ರಸ್ತಾವಿಸಿರುವ ಸ್ವಂತ ಭೂಮಿ)<br>– ಸ್ವಾಧೀನಪಡಿಸಿಕೊಳ್ಳಬೇಕೆಂದು ಪ್ರಸ್ತಾವಿಸಿದ ಗೇಣಿದಾರರ / ಅಧಿಭೋಗದಾರರ ಭೂಮಿ.<br>– ಪರಿಶಿಷ್ಟ ಪಂಗಡಗಳು ಮತ್ತು ಇತರ ಪಾರಂಪರಿಕ ಅರಣ್ಯ ನಿವಾಸಿಗಳ ಕಳೆದುಕೊಂಡಿರುವ ಯಾವುದೇ ತಮ್ಮ ಅರಣ್ಯ ಹಕ್ಕುಗಳು<br>– ಸಾಮಾನ್ಯ ಸ್ವತ್ತಿನ ಸಂಪನ್ಮೂಲಗಳ ಮೇಲೆ ಅವಲಂಬಿಸಿ ತಮ್ಮ ಜೀವನೋಪಾಯ ನಡೆಸುತ್ತಿರುವವರ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವುದರಿಂದ ಅವರ ಜೀವನೋಪಾಯಕ್ಕೆ ಆಗುವ ಪರಿಣಾಮಗಳು. |

| | |
|---|---|
| | – ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಮೇರೆಗೆ ತನ್ನ ಯಾವುದೇ ಯೋಜನೆಗಳ ಮತ್ತು ಸ್ವಾಧೀನತೆಯ ಅಡಿಯಲ್ಲಿರುವ ಅಂಥ ಭೂಮಿಯ ಮೂಲಕ ಗೊತ್ತುಪಡಿಸಿದ ಭೂಮಿ. |
| | – ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆ ಮೂರು ವರ್ಷಗಳು ಅಥವಾ ಅದಕ್ಕಿಂತ ಹೆಚ್ಚಿನ ವರ್ಷಗಳಿಂದ ನಗರ ಪ್ರದೇಶಗಳಲ್ಲಿ ಯಾವುದೇ ಭೂಮಿಯಲ್ಲಿ ವಾಸವಾಗಿರುವ ಸಂಬಂಧದಲ್ಲಿನ ಪ್ರಕ್ರಿಯೆ; |
| | – ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆ ಮೂರು ವರ್ಷಗಳು ಅಥವಾ ಅದಕ್ಕೂ ಮುಂಚಿತವಾಗಿ ನಗರ ಪ್ರದೇಶಗಳಲ್ಲಿ ಯಾವುದೇ ಭೂಮಿಯಲ್ಲಿ ವಾಸ ಮಾಡುತ್ತಿರುವವರ ಸಂಬಂಧದಲ್ಲಿನ ಪ್ರಕ್ರಿಯೆ. |
| | – ಸ್ವಾಧೀನಪಡಿಸಿಕೊಳ್ಳವುದಕ್ಕೆ ಮೂರು ವರ್ಷಗಳಿಗೂ ಮುಂಚಿನಿಂದಲೂ ಜೀವನೋಪಾಯದ ಪ್ರಾಥಮಿಕ ಮೂಲಗಳಲ್ಲಿರುವಂತೆ ಸ್ವಾಧೀನಪಡಿಸಿಕೊಳ್ಳುವ ಭೂಮಿಯ ಮೇಲೆ ಅವಲಂಬಿತವಾಗಿರುವವರು |
| | (ಬಿ) ಪ್ರಾಜೆಕ್ಟ್‌ನ ಮೂಲಕ ಪರೋಕ್ಷವಾಗಿ ಉಂಟಾಗಿರುವ ಪರಿಣಾಮಗಳು (ಸ್ವಂತ ಭೂಮಿಗಳನ್ನು ಸ್ವಾಧೀನಪಡಿಸಿಕೊಳ್ಳುವ ಮೂಲಕ ನೇರವಾಗಿ ಉಂಟಾದ ಪರಿಣಾಮ) |
| | (ಸಿ) ಉತ್ಪಾದನಾ ಆಸ್ತಿಗಳ ಮತ್ತು ಪ್ರಮುಖ ಭೂಮಿಗಳ ವಿವರಗಳ ಪಟ್ಟಿ. |
| ಸಾಮಾಜಿಕ–ಆರ್ಥಿಕ ಮತ್ತು ಸಾಂಸ್ಕೃತಿಕ ವೈಶಿಷ್ಟ್ಯ (ಸ್ವಾಧೀನಕ್ಕೆ ಒಳಪಡುವ ಪ್ರದೇಶ ಮತ್ತು ಪುನರ್ ವ್ಯವಸ್ಥೆ ಸ್ಥಳ) | – ಪ್ರಾಜೆಕ್ಟ್ ಪ್ರದೇಶದಲ್ಲಿ ಜನಸಂಖ್ಯೆಯ ಜನಾಂಗ ವಿವರಗಳು |
| | – ಆದಾಯ ಮತ್ತು ಬಡತನ ಮಟ್ಟಗಳು |
| | – ಟೀಕೆಗೆ ಗುರಿಯಾದ ಗುಂಪುಗಳು |
| | – ಭೂಮಿ ಬಳಕೆ ಮತ್ತು ಜೀವನೋಪಾಯ |
| | – ಸ್ಥಳೀಯ ಆರ್ಥಿಕ ಚಟುವಟಿಕೆಗಳು |
| | – ಸ್ಥಳೀಯ ಜೀವನೋಪಾಯಗಳಿಗೆ ನೆರವಾಗುವ ಅಂಶಗಳು |
| | – ರಕ್ತ ಸಂಬಂಧಿ ಮಾದರಿಗಳು ಮತ್ತು ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘಟನೆ |
| | – ಆಡಳಿತಾತ್ಮಕ ಸಂಘಟನೆ |
| | – ರಾಜಕೀಯ ಸಂಘಟನೆ |
| | – ಸಮುದಾಯ–ಆಧಾರಿತ ಮತ್ತು ನಾಗರಿಕ ಸಮಾಜ ಸಂಘಟನೆ |
| | – ಪ್ರಾದೇಶಿಕ ಅಭಿವೃದ್ಧಿಗಳು ಮತ್ತು ಐತಿಹಾಸಿಕ ಬದಲಾವಣೆ ಪ್ರಕ್ರಿಯೆಗಳು |
| | – ಜೀವ ಪರಿಸರದ ಗುಣಮಟ್ಟ |
| ಸಾಮಾಜಿಕ ಪರಿಣಾಮಗಳು | – ಪರಿಣಾಮಗಳನ್ನು ಗುರುತಿಸುವುದಕ್ಕೆ ಸಂಬಂಧಿಸಿದ ಸ್ವರೂಪ ಮತ್ತು ಪ್ರಸ್ತಾವನೆ |
| | – ಆರೋಗ್ಯ ಮತ್ತು ಜೀವನೋಪಾಯಗಳ ಮತ್ತು ಸಂಸ್ಕೃತಿಯ ಮೇಲೆ ಪರಿಣಾಮಗಳನ್ನು ಉಂಟು ಮಾಡುವಂಥ ಪ್ರಾಜೆಕ್ಟ್‌ನ ಚಕ್ರದ ವಿವಿಧ ಹಂತಗಳಲ್ಲಿ ಉಂಟಾಗುವ ಪರಿಣಾಮಗಳ ವರ್ಣನೆ. ಪರಿಣಾಮ ಪ್ರತಿಯೊಂದು ವಿಧಾನಕ್ಕಾಗಿ, ನೇರ/ಪರೋಕ್ಷ ಪರಿಣಾಮಗಳನ್ನು ಪ್ರತ್ಯೇಕವಾಗಿ ಗುರುತಿಸುವುದಕ್ಕಾಗಿ, ಸಂತ್ರಸ್ತ ಕುಟುಂಬಗಳ ವಿವಿಧ ಪ್ರವರ್ಗಗಳ ಮೇಲೆ ಉಂಟಾಗುವ ಪರಿಣಾಮಗಳಿಗಾಗಿ ಮತ್ತು ಅನ್ವಯವಾಗಬಹುದಾದ ಒಟ್ಟಾರೆ ಪರಿಣಾಮಗಳು. |
| ಪರಿಣಾಮಗಳ ಪ್ರದೇಶಗಳು ಒಳಗೊಂಡಿರುವ ಸೂಚಿತ ಪಟ್ಟಿ | – ಭೂಮಿ, ಜೀವನೋಪಾಯಗಳು ಮತ್ತು ಆದಾಯ, ಭೌತಿಕ ಸಂಪನ್ಮೂಲಗಳು, ಖಾಸಗಿ ಆಸ್ತಿಗಳು, ಸಾರ್ವಜನಿಕ ಸೇವೆಗಳು ಮತ್ತು ಬಳಕೆಗಳು, ಆರೋಗ್ಯ, ಸಂಸ್ಕೃತಿ ಮತ್ತು ಸಾಮಾಜಿಕ ಪ್ರವೃತ್ತಿಯ ಮೇಲಿನ ಪರಿಣಾಮಗಳು ಮತ್ತು ಲಿಂಗ ಆಧಾರಿತ ಪರಿಣಾಮಗಳನ್ನು ಒಳಗೊಂಡು ಪರಿಣಾಮ ಬೀರಿರುವ ಪ್ರದೇಶಗಳನ್ನು ತಿಳಿಸುವ ಪಟ್ಟಿ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹೆಚ್. ಹಂದಿಗೋಳ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಸ್ವಾಧೀನ–2)

ದಿನಾಂಕ: 11 ಜುಲೈ 2014.

**ನಮೂನೆ-III**

**ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನೆ**

**[ ಅಧಿನಿಯಮದ ೪ನೇ ಪ್ರಕರಣದ (೬)ನೇ ಉಪ-ಪ್ರಕರಣವನ್ನು ನೋಡಿ]**

೧) – ಉಪಶಮನಕ್ಕೆ ಪ್ರಸ್ತಾವನೆ

– ತಪ್ಪಿಸುವುದಕ್ಕೆ, ಉಪಶಮನ ಮಾಡುವುದಕ್ಕೆ ಮತ್ತು ಪರಿಹಾರ ನೀಡುವ ಪರಿಣಾಮಕ್ಕೆ ಕ್ರಮಗಳು.

– ಪುನರ್‌ವಸತಿ ಮತ್ತು ಪುನರ್ ವ್ಯವಸ್ಥೆ ನಿಬಂಧನೆಗಳಲ್ಲಿ ಮತ್ತು ಅಧಿನಿಯಮದಲ್ಲಿ ಸ್ಥೂಲವಾಗಿ ಹೇಳಿರುವಂತೆ ಒಳಗೊಂಡ ನಷ್ಟ ಪರಿಹಾರ ಕ್ರಮಗಳು

– ಭೂಮಿಯ ಅಗತ್ಯವಿರುವ ಸಂಸ್ಥೆ / ವ್ಯಕ್ತಿಯು, ಪ್ರಾಜೆಕ್ಟ್ ಪ್ರಸ್ತಾವಗಳಲ್ಲಿ ಮಂಡಿಸಿ ಹೇಳಿರುವ ಕ್ರಮಗಳು

– ಭೂಮಿಯ ಅಗತ್ಯವಿರುವ ಸಂಸ್ಥೆ/ವ್ಯಕ್ತಿಯು, ಸಾಮಾಜಿಕ ಪರಿಣಾಮ ಕಾರ್ಯವಿಧಾನ ಮತ್ತು ಸಾರ್ವಜನಿಕ ಅಹವಾಲುಗಳ ನಿರ್ಣಯಗಳಿಗೆ ಪ್ರತಿ ಸ್ಪಂದಿಸಿ ಕೈಗೊಳ್ಳಲಾಗುವ ಹೆಚ್ಚುವರಿ ಕ್ರಮಗಳು.

– ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನೆಯಲ್ಲಿ, ಸಾಂಸ್ಥಿಕ ಸ್ವರೂಪಗಳ ವಿವರಣೆಗಳು ಒಳಗೊಳ್ಳಬೇಕು ಮತ್ತು ಪ್ರತಿಯೊಂದು ಉಪಶಮನ ಕ್ರಮ ಮತ್ತು ಪ್ರತಿಯೊಂದು ಚಟುವಟಿಕೆಗಳಿಗಾಗಿ ಕಾಲಮಿತಿಗಳು ಮತ್ತು ವೆಚ್ಚಗಳಿಗಾಗಿ ಮುಖ್ಯಸ್ಥನ್ನು ಹೊಣೆಗಾರನಾಗಿರಬೇಕು.

೨) – ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನಾ ಸಾಂಸ್ಥಿಕ ಚೌಕಟ್ಟನ್ನು, ಸಾಂಸ್ಥಿಕ ಸ್ವರೂಪಗಳನ್ನು ಮತ್ತು ಪ್ರತಿಯೊಂದು ಉಪಶಮನ ಕ್ರಮಗಳಿಗಾಗಿ ಮುಖ್ಯಸ್ಥರ ಹೊಣೆಗಾರಿಕೆಯನ್ನು ನಿರೂಪಿಸುವುದನ್ನು.

– ಸರ್ಕಾರೇತರ ಸಂಸ್ಥೆಗಳು/ನಾಗರಿಕ ನಿಕಾಯ ಸಂಸ್ಥೆಗಳು ಒಳಗೊಂಡಿದ್ದರೆ ಅವುಗಳ ಪಾತ್ರವನ್ನು ನಿರ್ದಿಷ್ಟಪಡಿಸುವುದು.

– ಅಗತ್ಯಪಡಿಸಿದ ಸಾಮರ್ಥ್ಯಗಳು ಮತ್ತು ಸಮರ್ಥ ಅಭಿವೃದ್ಧಿ, ತಾಂತ್ರಿಕ ನೆರವು ಒಳಗೊಂಡತೆ ಯೋಜನೆ, ಯಾವುದಾದರೂ ಇದ್ದರೆ, ಸೂಚಿಸುವುದು.

– ಪ್ರತಿಯೊಂದು ಚಟುವಟಿಕೆಗಾಗಿ ಕಾಲಮಿತಿಗಳು.

೩) ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನೆಯ ಬಜೆಟ್ ಮತ್ತು ಎಲ್ಲ ಪುನರ್ ವ್ಯವಸ್ಥೆ ಮತ್ತು ಪುನರ್ವಸತಿ ವೆಚ್ಚಗಳ ಹಣಕಾಸಿನ ಉಪಶಮನ ಯೋಜನಾ ವೆಚ್ಚಗಳನ್ನು ವಾರ್ಷಿಕ ಬಜೆಟ್ ಮತ್ತು ಕ್ರಿಯಾಯೋಜನೆ ಮತ್ತು ಹಂತಹಂತವಾಗಿ ಒದಗಿಸುವ ಮೂಲಗಳನ್ನು ನಿರೂಪಿಸುವುದು.

೪). ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನೆಯ ಮೇಲ್ವಿಚಾರಣಾ, ಮೌಲ್ಯ ನಿರ್ಧರಣೆ ಮಾಡಲು ಪ್ರಧಾನ ಮೇಲ್ವಿಚಾರಣಾ ಮತ್ತು ಮೌಲ್ಯ ನಿರ್ಧರಣೆ, ಸೂಚಕರುಗಳ ನಿರೂಪಣೆ.

| | |
|---|---|
| ಸಾಮಾಜಿಕ ಪರಿಣಾಮ ನಿರ್ವಹಣಾ ಯೋಜನಾ ಪರಿಣಾಮ ನಿರ್ಧರಿಸುವಿಕೆ ಮತ್ತು ಮೌಲ್ಯನಿರ್ಧರಣೆ | – ವ್ಯವಸ್ಥೆಗಳ ಮತ್ತು ಮೇಲ್ವಿಚಾರಣಾ ಪಾತ್ರಗಳನ್ನು ವರದಿ ಮಾಡುವುದು |
| | – ಸ್ವತಂತ್ರ ಮೌಲ್ಯನಿರ್ಧರಣೆ ಯೋಜನೆ |

೫. ವೆಚ್ಚಗಳು ಮತ್ತು ಪ್ರಯೋಜನಗಳ ವಿಶ್ಲೇಷಣೆ ಮತ್ತು ಸ್ವಾಧೀನ ಕುರಿತು ಶಿಫಾರಸ್ಸು

– ಸಾರ್ವಜನಿಕ ಉದ್ದೇಶದ ನಿರ್ಧರಣೆ, ಕಡಿಮೆ ಪರ್ಯಾಯ ಸ್ಥಳಾಂತರ, ಭೂಮಿಯ ಕನಿಷ್ಠ ಅಗತ್ಯತೆಗಳು, ಸಾಮಾಜಿಕ ಪರಿಣಾಮಗಳ ಸ್ವರೂಪ ಮತ್ತು ತೀವ್ರತೆ ಮೇಲೆ ಮತ್ತು ಕಾರ್ಯಸಾಧ್ಯವಾಗುವ ಉಪಶಮನ ಕ್ರಮಗಳಿಗೆ ಮತ್ತು ಉಪಶಮನ ಕ್ರಮಗಳನ್ನು ಆಗಬಹುದಾದ ವೆಚ್ಚಗಳನ್ನು ಹೆಚ್ಚಿಸುವುದಕ್ಕೆ ಅಂತಿಮ ನಿರ್ಣಯಗಳನ್ನು ನಿರೂಪಿಸುವುದು.

ಮೇಲಿನ ವಿಶ್ಲೇಷಣೆಯನ್ನು, ಸ್ವಾಧೀನಪಡಿಸಿಕೊಳ್ಳುವುದಕ್ಕಾಗಲೀ ಅಥವಾ ಸ್ವಾಧೀನಪಡಿಸಿಕೊಳ್ಳದಿರುವುದಕ್ಕಾಗಲೀ ಅಂತಿಮ ಶಿಫಾರಸ್ಸಿನ ಪ್ರಸ್ತುತಕ್ಕಾಗಿ ಒಂದು ವಿಶ್ಲೇಷಣಾ ಚೌಕಟ್ಟಿನಲ್ಲಿರುವಂತೆ ನ್ಯಾಯಸಮ್ಮತ ತತ್ವವನ್ನು ಬಳಸಿಕೊಳ್ಳುವುದು.

೬. ಉಲ್ಲೇಖಗಳು ಮತ್ತು ಅನುಬಂಧ.– ಉಲ್ಲೇಖಕ್ಕಾಗಿ ಮತ್ತು ಮಾಹಿತಿಗಾಗಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹೆಚ್. ಹಂದಿಗೋಳ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಸ್ವಾಧೀನ-2)

ದಿನಾಂಕ: 11 ಜುಲೈ 2014.

**ನಮೂನೆ – IV**

**ಭಾಗ–ಎ. ಲಿಖಿತ ಪೂರ್ವ ಸಮ್ಮತಿ / ಘೋಷಣೆಯ ನಮೂನೆ**

**(ಸಾರ್ವಜನಿಕ–ಖಾಸಗಿ ಮತ್ತು ಖಾಸಗಿ ಉದ್ದೇಶಕ್ಕಾಗಿ)**

[ ಅಧಿನಿಯಮದ ೨(೨ಎ), ೨(೨ಬಿ), ೨(೩ಬಿ)ನೇ ಪ್ರಕರಣವನ್ನು ನೋಡಿ]

ಕ್ರಸಂ: **ಭೂ ಸ್ವಾಧೀನಕ್ಕೆ ಒಳಪಡುವ ಭೂ ಮಾಲೀಕರು/ವ್ಯಕ್ತಿಗಳಿಗೆ ಸಂಬಂಧಪಟ್ಟ ವಿವರಗಳು.**

೧. ಯಾರ ಹೆಸರಿನಲ್ಲಿ ಭೂಮಿಯನ್ನು ನೋಂದಾಯಿಸಲಾಗಿದೆಯೋ ಆ ವ್ಯಕ್ತಿಯ(ಗಳ) ಹೆಸರು :

೨. ಪತಿ/ಪತ್ನಿ ಹೆಸರು :

೩. ತಂದೆ/ತಾಯಿಯ ಹೆಸರು :

೪. ವಿಳಾಸ :

೫. ಗ್ರಾಮ/ಬಸ್ತಿ

೬. ಗ್ರಾಮ ಪಂಚಾಯತಿ/ಪೌರಸಭೆ/ಉಪನಗರ :

೭. ತಹಸೀಲು/ ತಾಲೂಕು :

೮. ಜಿಲ್ಲೆ :

೯. ವಯಸ್ಸಿನೊಂದಿಗೆ ಕುಟುಂಬದ ಇತರ ಸದಸ್ಯರ ಹೆಸರು (ಮಕ್ಕಳು ಮತ್ತು ವಯಸ್ಕ ಅವಲಂಬಿತರು ಒಳಗೊಳ್ಳುವರು)

೧೦. ಒಡೆತನದಲ್ಲಿರುವ ಭೂಮಿಯ ವಿಸ್ತಾರ :

೧೧. ವಿವಾದ ಭೂಮಿಗಳು ಯಾವುದಾರೂ ಇದ್ದರೇ :

೧೨. ಪಟ್ಟಾಗಳು / ಗುತ್ತಿಗೆದಾರರು / ಮಂಜೂರಾತಿ ಯಾವುದಾದರೂ ಇದ್ದರೆ :

೧೩. ಗೇಣಿ ಯಾವುದಾದರೂ ಇದ್ದರೆ ಅದನ್ನು ಒಳಗೊಂಡು ಯಾವುದೇ ಇತರ ಹಕ್ಕು :

೧೪. ಸಾರ್ವಜನಿಕ, ಖಾಸಗಿ ಪ್ರಾಜೆಕ್ಟ್‌ಗಳ ಉದ್ದೇಶಕ್ಕಾಗಿ, ಸಾರ್ವಜನಿಕ ಉದ್ದೇಶ/ಖಾಸಗಿ ಕಂಪನಿಗಳ ಉದ್ದೇಶಕ್ಕಾಗಿ ಸಾರ್ವಜನಿಕ ಅಥವಾ ಖಾಸಗಿ ಉದ್ದೇಶಗಳಿಗಾಗಿ ಸರ್ಕಾರವು ನನ್ನ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಈ ಮುಂದಿನಂತೆ ತಿಳಿಸಲು ಬಯಸುತ್ತೇನೆ. ದಯವಿಟ್ಟು ಕೆಳಗಿನವುಗಳಲ್ಲಿ ಒಂದನ್ನು ಗುರುತು ಮಾಡಿ.

ಈ ಒಪ್ಪಿಗೆ ನಮೂನೆಯಲ್ಲಿ ಇರುವ ಒಳಾಂಶಗಳನ್ನು ನಾನು ಓದಿದ್ದೇನೆ/ಮಾಹಿತಿ ಪಡೆದಿದ್ದೇನೆ, ಮತ್ತು . . . . . . . . ಭಾಷೆಯಲ್ಲಿ ನನಗೆ ವಿವರಿಸಲಾಗಿದೆ ಮತ್ತು

ನಾನು ಈ ಸ್ವಾಧೀನಕ್ಕೆ ಒಪ್ಪಿದ್ದೇನೆ :

ಅಥವಾ

ನಾನು ಈ ಸ್ವಾಧೀನಕ್ಕೆ ಒಪ್ಪಿರುವುದಿಲ್ಲ.

ಸಂತ್ರಸ್ಥ ಕುಟುಂಬ/ಗಳು ಸಹಿ/ಹೆಬ್ಬೆರಳ ಗುರುತು ಮತ್ತು ದಿನಾಂಕ:

ಸಹಿ ಮಾಡಿ ನಮೂನೆಯಲ್ಲಿ ಗೊತ್ತುಪಡಿಸಿದ ಜಿಲ್ಲಾ ನೌಕರ ಸ್ವೀಕರಿಸಿದ ದಿನಾಂಕ ಮತ್ತು ಸಹಿ :

**ಭಾಗ–ಬಿ ಗ್ರಾಮ ಸಭಾ ನಿರ್ಣಯ/ಘೋಷಣೆಯ ನಮೂನೆ**

**(ಸಾರ್ವಜನಿಕ–ಖಾಸಗಿ ಪ್ರಾಜೆಕ್ಟ್‌ಗಳು ಸಾರ್ವಜನಿಕ ಉದ್ದೇಶಕ್ಕಾಗಿ, ಸಾರ್ವಜನಿಕ ಉದ್ದೇಶ ಮತ್ತು ಖಾಸಗಿ ಪ್ರಾಜೆಕ್ಟ್‌ರುಗಳು ಸಾರ್ವಜನಿಕ ಉದ್ದೇಶಕ್ಕಾಗಿ )**

**[ಅಧಿನಿಯಮದ ೪೬(೫)ನೇ ಪ್ರಕರಣವನ್ನು ನೋಡಿ]**

____________ ಜಿಲ್ಲೆಯಲ್ಲಿನ ____________ ತಹಶೀಲ್/ತಾಲೂಕು ______________ ಪಂಚಾಯಿತಿ ಅಥವಾ ಪರಿಷತ್ತು (ಕೌನ್ಸಿಲ್) ________________ ನೊಳಗೆ ________ ನ ಈ ಕೆಳಗೆ ಸಹಿ ಮಾಡಿದ ಗ್ರಾಮ ಸಭಾ ಸದಸ್ಯರಾದ ನಾವು, ಈ ಗ್ರಾಮ ಸಭೆಯ ಮೂಲಕ ಪ್ರಮಾಣೀಕರಿಸುವುದೇನೆಂದರೆ,

ಮುಂದಿನ ಪ್ರಮಾಣಪತ್ರಗಳು ಆಡಳಿತ ಮತ್ತು ನೌಕರರು ಒದಗಿಸಿದ ಮಾಹಿತಿಯನ್ನು ಆಧರಿಸಿವೆ ಎಂದು ಹೇಳಲು ಇಚ್ಛಿಸುತ್ತೇನೆ. ಈ ಆಧಾರದ ಮೇಲೆ ಗ್ರಾಮ ಸಭೆಯು ಈ ಮೂಲಕ ಪ್ರಮಾಣೀಕರಿಸಿದೆ.

(i) ಈ ಅಧಿನಿಯಮದ ೪(೧)ನೇ ಪ್ರಕರಣದ ಮೇರೆಗೆ ಅನುಸೂಚಿತ ಪ್ರದೇಶವಲ್ಲದ ಪ್ರದೇಶಕ್ಕೆ ಸಂಬಂಧಿಸಿದಂತೆ ____________ ಪ್ರಾಜೆಕ್ಟ್‌ಗಳ ಉದ್ದೇಶಕ್ಕಾಗಿ ಅದನ್ನು ಸಮಾಲೋಚಿಸಲಾಗಿದೆ. ಮತ್ತು / ಅಥವಾ

(ii) ಅಧಿನಿಯಮದ ೪೧(೩)ನೇ ಪ್ರಕರಣದ ಮೇರೆಗೆ ಅನುಸೂಚಿತ ಪ್ರದೇಶಕ್ಕೆ ಸಂಬಂಧಿಸಿದ, -------------- ಪ್ರಾಜೆಕ್ಟ್‌ನ ಒಪ್ಪಿಗೆ / ಒಪ್ಪಿಗೆ ನಿರಾಕರಿಸಿದೆ / ಅವರು ಈ ಮುಂದಿನವುಗಳನ್ನು ಒಳಗೊಳ್ಳುವುದು:

- ಖಾಸಗಿ ಭೂಮಿಯ ____________ ಎಕರೆಯನ್ನು ಸ್ವಾಧೀನಪಡಿಸಿಕೊಂಡಿದೆ.
- ಪ್ರಾಜೆಕ್ಟ್‌ಗೆ ಸರ್ಕಾರೀ ಭೂಮಿಯ ______________ ಎಕರೆಯನ್ನು ವರ್ಗಾಯಿಸಿದೆ.
- ಪ್ರಾಜೆಕ್ಟ್‌ಗೆ ಅರಣ್ಯ ಭೂಮಿಯ ____________ ಎಕರೆಯನ್ನು ವರ್ಗಾಯಿಸಿದೆ.
- ಪರಿಹಾರ, ಪುನರ್ ವಸತಿ, ಪುನರ್ ವ್ಯವಸ್ಥೆ ಸೌಲಭ್ಯಗಳು, ನಿಬಂಧನೆಗಳು ಮತ್ತು ಷರತ್ತುಗಳು ಭೂಮಿಯನ್ನು ಅಗತ್ಯಪಡಿಸುವ ಸಂಸ್ಥೆ/ವ್ಯಕ್ತಿಯು ಒಪ್ಪಿದ ಸಾಮಾಜಿಕ ಪರಿಣಾಮ ನಿವಾರಣ ಕ್ರಮಗಳನ್ನು (ಹೆಸರನ್ನು ತಿಳಿಸುವುದು) ಲಗತ್ತಿಸಿದೆ.

ದಿನಾಂಕ ಮತ್ತು ಗ್ರಾಮ ಸಭಾ ಸದಸ್ಯರು ಸಹಿತಗಳು/ಹೆಬ್ಬೆರಳಿನ ಗುರುತುಗಳು

ದಿನಾಂಕ ಮತ್ತು ಗೊತ್ತುಪಡಿಸಿದ ಜಿಲ್ಲೆ ಅಥವಾ ಗೊತ್ತುಪಡಿಸಿದ ಅಧಿಕಾರಿಯ ನಿರ್ಣಯಗಳನ್ನು ಸ್ವೀಕೃತಿಯ ಮೇಲೆ ಸಹಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹೆಚ್. ಹಂದಿಗೋಳ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಸ್ವಾಧೀನ–2)

ದಿನಾಂಕ: 11 ಜುಲೈ 2014.

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜುಲೈ ೧೧, ೨೦೧೪ (ಆಷಾಡ ೨೦, ಶಕ ವರ್ಷ ೧೯೩೬) | ನಂ. ೪೫೫ |
|---|---|---|
| **Part – IV-A** | **Bangalore, Friday, July 11, 2014 (Ashadha 20, Shaka Varsha 1936)** | **No. 455** |

## FINANCE SECRETARIAT

### NOTIFICATION

### No. FD 08 PES 2011, Bangalore, Dated 11th July, 2014

The draft of the following rules further to amend the Karnataka Excise Licences (General Conditions) Rules, 1967 which the Government of Karnataka proposes to make in exercise of the powers conferred by section 71 of the Karnataka Excise Act, 1965 (Karnataka Act 21 of 1966) is hereby published as required by sub-section (1) of the said Section, for the information of all the persons likely to be affected thereby and notice is hereby given that the said draft will be taken into consideration after fifteen days from the date of its publication in the official Gazette.

Any objection or suggestion which may be received by the State Government from any person in respect of the said draft before the expiry of the period specified above will be considered by the State Government. Objections and Suggestions may be addressed to the Principal Secretary to Government, Finance Department, Vidhana Soudha, Bangalore-560 001.

**DRAFT RULES**

**1. Title and commencement.-** (1) These rules may be called the Karnataka Excise Licences (General Conditions) (Amendment) Rules, 2014.

(2) They shall come into force from the date of their publication in the official Gazette.

**2. Substitution of rule 7.-** In the Karnataka Excise Licences (General Conditions) Rules, 1967 (hereinafter referred to as the said rules) for rule 7, the following shall be substituted, namely:-

"**7. Entrance and Exit.-** There shall be not more than one and the same entrance and exit for the CL-2 shop and CL-11 (C) shop".

**3. Amendment of rule 23.-** In rule 23 of the said rules, the first proviso shall be omitted.

By order and in the name of Governor of Karnataka

**M.S. SHIVARAM**
Deputy Secretary to Government
(Administration & Co-Ordination)
Finance Department

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜುಲೈ ೧೧, ೨೦೧೪ (ಆಷಾಡ ೨೦, ಶಕ ವರ್ಷ ೧೯೩೬) | ನಂ. ೪೫೬ |
|---|---|---|
| **Part – IV-A** | **Bangalore, Friday, July 11, 2014 (Ashadha 20, Shaka Varsha 1936)** | **No. 456** |


## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಗ್ರಾಅಪ 47 ಸೇಶಿಕಾ 2014, ಬೆಂಗಳೂರು, ದಿನಾಂಕ: 11ನೇ ಜುಲೈ, 2014

ಕರ್ನಾಟಕ ಪಂಚಾಯತ್ ರಾಜ್ ಇಂಜಿನಿಯರಿಂಗ್ ಸೇವೆಗಳು (ವೃಂದ ಮತ್ತು ನೇಮಕಾತಿ) ನಿಯಮಗಳು, 2008ಕ್ಕೆ ಕರ್ನಾಟಕ ಸರ್ಕಾರವು ತಿದ್ದುಪಡಿ ಮಾಡಲು ಪ್ರಸ್ತಾವಿಸಿದ್ದು, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ 1978 (1990ರ ಕರ್ನಾಟಕ ಅಧಿನಿಯಮ (14)ರ ಪ್ರಕರಣ 8ರ ಸಹವಾಚನದೊಂದಿಗೆ 3ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ ಪ್ರಕರಣದ ಖಂಡ (ಎ)ರಲ್ಲಿ ಅಗತ್ಯಪಡಿಸಲಾದಂತೆ, ಇದರಿಂದ ಬಾಧಿತರಾಗಬಹುದಾದಂತಹ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಕರಡನ್ನು ಈ ಮೂಲಕ ಪ್ರಕಟಿಸಲಾಗಿದೆ ಹಾಗೂ ಸದರಿ ಕರಡು ನಿಯಮಗಳನ್ನು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ 15 ದಿನಗಳ ಅವಧಿಯ ನಂತರ, ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಿದೆ.

ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರವು ಯಾವುದೇ ವ್ಯಕ್ತಿಯಿಂದ ಆಕ್ಷೇಪಣೆ ಅಥವಾ ಸಲಹೆಗಳನ್ನು ಮೇಲೆ ನಿಗದಿಪಡಿಸಿದ ಅವಧಿಯೊಳಗೆ ಸ್ವೀಕರಿಸಿದಲ್ಲಿ ಅವುಗಳನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಹಾಗೂ ಸಲಹೆಗಳನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿಗಳ ಕಟ್ಟಡ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು–560001, ಈ ವಿಳಾಸಕ್ಕೆ ಕಳುಹಿಸಬಹುದಾಗಿದೆ.

### ಕರಡು ನಿಯಮಗಳು

**1. ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಪಂಚಾಯತ್ ರಾಜ್ ಇಂಜಿನಿಯರಿಂಗ್ ಸೇವೆಗಳು (ವೃಂದ ಮತ್ತು ನೇಮಕಾತಿ) (ತಿದ್ದುಪಡಿ) ನಿಯಮಗಳು, 2014 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನಿಯಮ 2ರ ತಿದ್ದುಪಡಿ:–** ಕರ್ನಾಟಕ ಪಂಚಾಯತ್ ರಾಜ್ ಇಂಜಿನಿಯರಿಂಗ್ ಸೇವೆಗಳು (ವೃಂದ ಮತ್ತು ನೇಮಕಾತಿ) ನಿಯಮಗಳು, 2008ರ ನಿಯಮ 2ರಲ್ಲಿನ ಉಪ ನಿಯಮ (2)ರ ಕೆಳಗೆ ಈ ಕೆಳಕಂಡ ಪರಂತುಕವನ್ನು ಸೇರಿಸತಕ್ಕದ್ದು.

"ಪರಂತು, ಕರ್ನಾಟಕ ಪಂಚಾಯತ್ ರಾಜ್ ಇಂಜಿನಿಯರಿಂಗ್ ಸೇವೆಗಳು (ವೃಂದ ಮತ್ತು ನೇಮಕಾತಿ) ನಿಯಮಗಳು, 2008ರ ಪ್ರಾರಂಭದ ದಿನಾಂಕದಿಂದ ಮೂರು ತಿಂಗಳುಗಳ ಅವಧಿ ಮುಕ್ತಾಯವಾದ ನಂತರ ಅಭಿಮತ ವ್ಯಕ್ತಪಡಿಸಿರುವಂತಹ ಮೇಲಿನ ಉಪ ನಿಯಮ (2)ರಲ್ಲಿ ತಿಳಿಸಿರುವ ವಿವಿಧ ಹುದ್ದೆಗಳ ಎದುರು ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗಳು ಕರ್ನಾಟಕ ಪಂಚಾಯತ್ ರಾಜ್ ಇಂಜಿನಿಯರಿಂಗ್ ಸೇವೆಗಳು (ವೃಂದ ಮತ್ತು ನೇಮಕಾತಿ) (ತಿದ್ದುಪಡಿ) ನಿಯಮಗಳು, 2014 ಪ್ರಾರಂಭವಾದ ದಿನಾಂಕದಿಂದ ತೊಂಭತ್ತು ದಿನಗಳ ಅವಧಿಯವರೆಗೆ ಕರ್ನಾಟಕ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ವಿಲೀನಗೊಳ್ಳಲು ಪರಿಗಣಿಸಬಹುದಾಗಿದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದೇಶ್ ಪೋತಲಕಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## RURAL DEVELOPMENT AND PANCHAYAT RAJ SECRETARIAT

### NOTIFICATION

### No. RDP 47 Se.Shi.Ka. 2014, Bangalore, Dated 11th July, 2014

The draft of the following rules further to amend the "Karnataka Panchayat Raj Engineering Services (Cadre & Recruitment) Rules, 2008, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Service Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection and suggestion which may be received by the State Government from any person with respect to the said draft rules before the expiry of the period specified above will be considered by the State Government. Objections

and suggestions may be addressed to the Additional Chief Secretary to Government, Rural Development and Panchayat Raj Department, M.S. Building, Dr. B.R.Ambedkar Veedi, Bangalore-560 001.

**DRAFT RULES**

1. **Title and commencement**:- (1) These rules may be called the "Karnataka Panchayat Raj Engineering Services (Cadre & Recruitment) (Amendment) Rules, 2014.

(2) They shall come into force from the date of their publication in the Official Gazette.

2. **Amendment of Rule 2**:- In Rule 2 of the "Karnataka Panchayat Raj Engineering Services (Cadre & Recruitment) Rules, 2008, after sub rule (2), the following proviso shall be inserted,-

"Provided that the persons working against various posts mentioned in sub rule (2) above, who have exercised options beyond the expiry of three months from the date of commencement of Karnataka Panchayat Raj Engineering Services (Cadre and Recruitment) Rules, 2008 till date of commencement as also for a period of ninety days from the date of commencement of Karnataka Panchayat Raj Engineering Services (Cadre and Recruitment) (Amendment) Rules, 2014, may also be considered for absorption in the Karnataka Panchayat Raj Engineering Department Service."

By Order and in the name of the Governor of Karnataka,

**SIDDESH POTHALAKATTI**
Under Secretary to Government,
Rural Development & Panchayat Raj Department.


# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೧೪, ೨೦೧೪ (ಆಷಾಢ ೨೩, ಶಕ ವರ್ಷ ೧೯೩೬) | ನಂ. ೪೫೭ |
|---|---|---|
| **Part – IV-A** | **Bangalore, Monday, July 14, 2014 (Ashadha 23, Shaka Varsha 1936)** | **No. 457** |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 50 ಶಾಸನ 2013, ಬೆಂಗಳೂರು, ದಿನಾಂಕ: 14–07–2014**

ಕರ್ನಾಟಕ ಪಂಚಾಯತ್ ರಾಜ್ (ಎರಡನೇ ತಿದ್ದುಪಡಿ) ವಿಧೇಯಕ, 2013ಕ್ಕೆ 2014ರ ಜೂನ್ ಇಪ್ಪತ್ತೇಳನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2014ರ ಕರ್ನಾಟಕ ಅಧಿನಿಯಮ ಸಂಖ್ಯೆ: 23 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2014ರ ಕರ್ನಾಟಕ ಅಧಿನಿಯಮ ಸಂಖ್ಯೆ 23**

(2014ರ ಜುಲೈ ತಿಂಗಳ ಹದಿನಾಲ್ಕನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ಪಂಚಾಯತ್ ರಾಜ್ (ಎರಡನೇ ತಿದ್ದುಪಡಿ) ಅಧಿನಿಯಮ, 2013

(2014ರ ಜೂನ್ ತಿಂಗಳ ಇಪ್ಪತ್ತೇಳನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ನ್ನು (1993ರ ಕರ್ನಾಟಕ ಅಧಿನಿಯಮ 14) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಪಂಚಾಯತ್ ರಾಜ್ (ಎರಡನೇ ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) 2 ಮತ್ತು 3ನೇ ಪ್ರಕರಣಗಳು 2003ರ ಸೆಪ್ಟೆಂಬರ್ 3ನೇ ದಿನದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು ಮತ್ತು ಉಳಿದ ಪ್ರಕರಣಗಳು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 136ಎ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರಲ್ಲಿ (1993ರ ಕರ್ನಾಟಕ ಅಧಿನಿಯಮ 14) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ),–

(1) (1)ನೇ ಉಪಪ್ರಕರಣದಲ್ಲಿ, "ರಾಜ್ಯ ಚುನಾವಣಾ ಆಯೋಗ ಅಥವಾ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(2) (2)ನೇ ಉಪಪ್ರಕರಣದಲ್ಲಿ, "ರಾಜ್ಯ ಚುನಾವಣಾ ಆಯೋಗ ಅಥವಾ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(3) (3)ನೇ ಉಪಪ್ರಕರಣದಲ್ಲಿ, "ಸದಸ್ಯನ ಸದಸ್ಯತ್ವವು ನಿಂತುಹೋಗತಕ್ಕದ್ದು" ಎಂಬ ಪದಗಳಿಗೆ "ಸಕ್ಷಮ ಪ್ರಾಧಿಕಾರಿಯು, ಅಂಥ ಸದಸ್ಯನಿಗೆ ಒಂದು ನೋಟೀಸನ್ನು ಹೊರಡಿಸಿ, ಅಂಥ ನೋಟೀಸನ್ನು ಸ್ವೀಕರಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ, ಘೋಷಣೆಯನ್ನು ದಾಖಲು ಮಾಡುವಂತೆ ಅಥವಾ ಸರಿಯಾದುದಲ್ಲದ ಘೋಷಣೆಯನ್ನು ಸರಿಪಡಿಸುವಂತೆ ಅಂಥ ಸದಸ್ಯನಿಗೆ ನೀಡತಕ್ಕದ್ದು. ಹಾಗೆ ಮಾಡಲು ತಪ್ಪಿದಲ್ಲಿ, ಅದನ್ನು ದುರ್ನಡತೆ ಎಂದು ಅರ್ಥೈಸತಕ್ಕದ್ದು ಮತ್ತು ಸಕ್ಷಮ ಪ್ರಾಧಿಕಾರವು ಅಂಥ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಸರ್ಕಾರವು 136ನೇ ಪ್ರಕರಣದ ಅಡಿಯಲ್ಲಿ ಕ್ರಮ ಕೈಗೊಳ್ಳಬಹುದು." ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(4)ನೇ ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**3. 175ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 175ಎ ಪ್ರಕರಣದಲ್ಲಿ,–

(1) (1)ನೇ ಉಪಪ್ರಕರಣದಲ್ಲಿ, "ರಾಜ್ಯ ಚುನಾವಣಾ ಆಯೋಗ ಅಥವಾ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(2) (2)ನೇ ಉಪಪ್ರಕರಣದಲ್ಲಿ, "ರಾಜ್ಯ ಚುನಾವಣಾ ಆಯೋಗ ಅಥವಾ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(3) (3)ನೇ ಉಪಪ್ರಕರಣದಲ್ಲಿ, "ಸದಸ್ಯನ ಸದಸ್ಯತ್ವವು ನಿಂತುಹೋಗತಕ್ಕದ್ದು" ಎಂಬ ಪದಗಳಿಗೆ "ಸಕ್ಷಮ ಪ್ರಾಧಿಕಾರಿಯು, ಅಂಥ ಸದಸ್ಯನಿಗೆ ಒಂದು ನೋಟೀಸನ್ನು ಹೊರಡಿಸಿ, ಅಂಥ ನೋಟೀಸನ್ನು ಸ್ವೀಕರಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ, ಘೋಷಣೆಯನ್ನು ದಾಖಲು ಮಾಡುವಂತೆ ಅಥವಾ ಸರಿಯಾದುದಲ್ಲದ ಘೋಷಣೆಯನ್ನು ಸರಿಪಡಿಸುವಂತೆ ಅಂಥ ಸದಸ್ಯನಿಗೆ ನೀಡತಕ್ಕದ್ದು. ಹಾಗೆ ಮಾಡಲು ತಪ್ಪಿದಲ್ಲಿ, ಅದನ್ನು ದುರ್ನಡತೆ ಎಂದು ಅರ್ಥೈಸತಕ್ಕದ್ದು ಮತ್ತು ಸಕ್ಷಮ ಪ್ರಾಧಿಕಾರವು ಅಂಥ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಸರ್ಕಾರವು 175ಎ ಪ್ರಕರಣದ ಅಡಿಯಲ್ಲಿ ಕ್ರಮ ಕೈಗೊಳ್ಳಬಹುದು." ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(4) (4)ನೇ ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**4. ಸಿಂಧುಗೊಳಿಸುವಿಕೆ.–** ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ, ಆದೇಶದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದ 136ಎ ಮತ್ತು 175ಎ ಪ್ರಕರಣದ ಅಡಿಯಲ್ಲಿ ಕ್ರಮ ತೆಗೆದುಕೊಂಡ ಹೊರತು ಯಾವೊಬ್ಬ ಸದಸ್ಯನು ಸದಸ್ಯನಾಗಿರುವುದು ನಿಂತುಹೋಗತಕ್ಕದ್ದಲ್ಲ, ಈ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದ 136ಎ ಮತ್ತು 175ಎ ಪ್ರಕರಣಗಳ ಉಪಬಂಧಗಳು ಸಂಬಂಧಪಟ್ಟ ಎಲ್ಲಾ ಅವಧಿಯಲ್ಲಿಯೂ ಜಾರಿಯಲ್ಲಿದ್ದಿದ್ದರೆ ಹೇಗೋ ಹಾಗೆ ಸಿಂಧುವಾಗಿದೆ ಮತ್ತು ಪರಿಣಾಮಕಾರಿಯಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಅದಕ್ಕೆ ಅನುಸಾರವಾಗಿ,–

(ಎ) ಯಾವುದೇ ದಾವೆ ಅಥವಾ ಇತರ ವ್ಯವಹರಣೆಗಳನ್ನು ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧಿಕರಣದಲ್ಲಿ ಅಥವಾ ಯಾವುದೇ ಪ್ರಾಧಿಕಾರದ ಮುಂದೆ ನಡೆಸತಕ್ಕದ್ದಲ್ಲ ಅಥವಾ ಮುಂದುವರಿಸತಕ್ಕದ್ದಲ್ಲ; ಮತ್ತು

(ಬಿ) ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿರುವುದನ್ನು ಹೊರತುಪಡಿಸಿ ಅನ್ಯಥಾ ಯಾವೊಬ್ಬ ಸದಸ್ಯನ ಸದಸ್ಯತ್ವವನ್ನು ಕೊನೆಗೊಳಿಸುವಂತೆ ಯಾವುದೇ ನ್ಯಾಯಾಲಯವು ನಿರ್ದೇಶಿಸಿ ಯಾವುದೇ ಡಿಕ್ರಿ ಅಥವಾ ಆದೇಶವನ್ನು ಜಾರಿ ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಗುಂಜಿಗಾವಿ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೧೪, ೨೦೧೪ (ಆಷಾಡ ೨೩, ಶಕ ವರ್ಷ ೧೯೩೬) | ನಂ. ೪೫೮ |
| **Part – IV-A** | **Bangalore, Monday, July 14, 2014 (Ashadha 23, Shaka Varsha 1936)** | **No. 458** |


## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಐ 192 ಎಂಎಂಎನ್ 2014, ಬೆಂಗಳೂರು, ದಿನಾಂಕ: 14–07–2014**

Granite Conservation & Development Rules 1999 ರ ನಿಯಮ 6(1) ರನ್ವಯ ಕಲ್ಲುಗಣಿ ಗುತ್ತಿಗೆಗಳ ಕನಿಷ್ಠ ಅವಧಿಯು 20 ವರ್ಷಗಳಿಗೆ ವಿಸ್ತರಿಸಲು / ನವೀಕರಿಸಲು ಅವಕಾಶವಿದ್ದು, ಈ ಅಧಿಸೂಚನೆಗೆ ಅನುಬಂಧಿಸಿರುವ 105 ಕಲ್ಲುಗಣಿ ಗುತ್ತಿಗೆಗಳ ಅವಧಿಯನ್ನು 10 ವರ್ಷಗಳಿಗೆ ಮಾತ್ರ ಅಧಿಸೂಚನೆ ಹೊರಡಿಸಿರುವುದರಿಂದ ಸದರಿ ಕಲ್ಲುಗಣಿ ಗುತ್ತಿಗೆಗಳ ಅವಧಿಯನ್ನು ಈ ಪತ್ರಕ್ಕೆ ಅನುಬಂಧಿಸಿರುವ ಅನುಬಂಧ–1 ರ ಕಲಂ 3 ರಲ್ಲಿ ಸೂಚಿಸಿರುವ ದಿನಾಂಕದ ಅಧಿಸೂಚನೆಗಳಲ್ಲಿ ಕಲಂ 7 ರಲ್ಲಿ ಅಮಲ್ಜಾರಿ ಮಾಡಿರುವ ದಿನಾಂಕದಿಂದ 10 ವರ್ಷಗಳಿಗೆ ಎಂಬುದನ್ನು 20 ವರ್ಷಗಳಿಗೆ ಎಂದು ಈ ಕೆಳಕಂಡ ಷರತ್ತಿಗೊಳಪಡಿಸಿ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

1. ವಿಸ್ತರಿಸಲಾದ ಅವಧಿಗೆ ಸಂಬಂಧಿಸಿದಂತೆ ಚಾಲ್ತಿಯಲ್ಲಿರುವ ಗಣಿ ಗುತ್ತಿಗೆಗಳಿಗೆ ಸಂಬಂಧಿಸಿದಂತೆ ಅನುಮೋದಿತ ಕ್ವಾಯಿರಿಂಗ್ ಪ್ಲಾನ್ ಪರಿಸರ ವಿಮೋಚನಾ ಪತ್ರ ಇತ್ಯಾಧಿಗಳನ್ನು ದಿನಾಂಕ:16.12.2013ರ ಕರ್ನಾಟಕ ಉಪ ಖನಿಜಗಳ ರಿಯಾಯಿತಿ(ತಿದ್ದುಪಡಿ) ನಿಯಮಾವಳಿಗಳು 2013ರನ್ವಯ ಕ್ರಮವಹಿಸತಕ್ಕದ್ದು.

